ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೧ ಆಗಸ್ಟ್ ೨೦೧೫ ಸಂಚಿಕೆ : ೦೮




ಸಿದ್ಧಗಂಗಾ ತಾಂತ್ರಿಕ ಕಾಲೇಜಿನ 6ನೇ ಘಟಿಕೋತ್ಸವವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಇಸ್ರೋ ಅಧ್ಯಕ್ಷರಾದ ಡಾ. ಕಿರಣ್‌ಕುಮಾರ್, ಬೆಂಗಳೂರು ವಿ.ವಿ. ವಿಶ್ರಾಂತ ಕುಲಪತಿ ಪ್ರೊ. ಸಿದ್ಧಪ್ಪ, ನಿರ್ದೇಶಕರಾದ ಡಾ. ಎಂ.ಎನ್. ಚನ್ನಬಸಪ್ಪ, ಪ್ರಾಂಶುಪಾಲರಾದ ಡಾ. ಶಿವಕುಮಾರಯ್ಯ, ಡೀನ್ ಬಸವರಾಜಯ್ಯ ಎಸ್‌ಐಟಿ ಗೌರ್ನಿಂಗ್ ಕೌನ್ಸಿಲ್ ಸದಸ್ಯರು ಉಪಸ್ಥಿತರಿದ್ದರು.



ಶ್ರೀಮಠಕ್ಕೆ ಭೇಟಿ ನೀಡಿದ ಇಸ್ರೋ ಅಧ್ಯಕ್ಷರಾದ ಡಾ. ಕಿರಣ್‌ಕುಮಾರ್‌ರವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಫಲಪುಷ್ಪಗಳನ್ನು ಅರ್ಪಿಸಿ ದರ್ಶನಾಶೀರ್ವಾದಗಳನ್ನು ಪಡೆದರು.



ಪರಮಪೂಜ್ಯರು ಇಸ್ರೋ ಅಧ್ಯಕ್ಷರಾದ ಡಾ. ಕಿರಣ್‌ಕುಮಾರ್‌ರವರನ್ನು ಆಶೀರ್ವದಿಸುತ್ತಿರುವುದು.





ಸಂಪಾದಕರು :
**ಹೆಚ್.ಬಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಸಂಚಾಲಕರು :
**ಎಂ. ರೇಣುಕಾರಾಧ್ಯ**

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**

ವಿತರಕರು :
**ಆರ್.ಎಸ್. ಮಲ್ಲೇಶಪ್ಪ**

ಛಾಯಾ ಚಿತ್ರಗಳು :
**ಬಿ.ಸಿ. ಸುರೇಶ್**

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

ವಿಳಾಸ :
**'ಸಂಪಾದಕರು'**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು - ೫೭೨ ೧೦೪.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೫೧ ಆಗಸ್ಟ್ ೨೦೧೫ ಸಂಚಿಕೆ : ೮


## ಒಳಪುಟಗಳಲ್ಲಿ .................




ಚಂದಾ ವಿವರ : ವಾರ್ಷಿಕ ಚಂದಾ ರೂ. ೨೦೦/-
ಆಜೀವ ಸದಸ್ಯತ್ವ ರೂ. ೧೫೦೦/- ಬಿಡಿ ಪ್ರತಿ ರೂ. ೧೨.೦೦

## ರಾಷ್ಟ್ರ ಭಕ್ತರನ್ನು ನೆನೆಯಬೇಕು

ಇತಿಹಾಸ ಪ್ರಜ್ಞೆ ಇಲ್ಲದ ಒಂದು ರಾಷ್ಟ್ರಕ್ಕೆ ಭವಿಷ್ಯವೂ ಇಲ್ಲ. ಒಂದು ರಾಷ್ಟ್ರವು ತನ್ನ ಗತಕಾಲದ ಬಗ್ಗೆ ಹಕ್ಕು ಸಾಧಿಸಿದರಷ್ಟೇ ಸಾಲದು ಅದನ್ನು ತನ್ನ ಉಜ್ವಲ ಭವಿಷ್ಯತ್ತಿನ ನಿರ್ಮಾಣಕ್ಕೆ ಬಳಸಿಕೊಳ್ಳುವ ಸಾಮರ್ಥ್ಯವನ್ನು ಗಳಿಸಿಕೊಳ್ಳಬೇಕು. ಒಂದು ರಾಷ್ಟ್ರವು ತನ್ನ ಚರಿತ್ರೆಯ ಸ್ವಾಮಿಯಾಗಬೇಕೇ ಹೊರತು ಅದರ ಗುಲಾಮನಲ್ಲ. ಹಿಂದೆ ಮಾಡಿದೆವೆಂಬ ಒಂದೇ ಕಾರಣಕ್ಕಾಗಿ ಅಂತಹುದೇ ಪ್ರಯತ್ನಗಳನ್ನು ಮತ್ತೆ ಮಾಡಲು ಪ್ರಯತ್ನಿಸುವುದು ಮೂರ್ಖತನವೇ ಸರಿ' (ವಿ.ದಾ. ಸಾವರ್ಕರ್)

ಸ್ವಾತಂತ್ರ್ಯ ದಿನಾಚರಣೆಯ ಈ ಸಂದರ್ಭದಲ್ಲಿ ಪ್ರತಿಯೊಬ್ಬ ಭಾರತೀಯನೂ ಮನನ ಮಾಡಿಕೊಳ್ಳಬೇಕಾದ ಮಾತುಗಳು ಸಾವರ್ಕರ್ ಅವರ ಮೇಲಿನ ಮಾತುಗಳು. ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವ ನಾವಿಂದು, ಸ್ವಾತಂತ್ರ್ಯವನ್ನು ತಂದುಕೊಟ್ಟ ರಾಷ್ಟ್ರ ಭಕ್ತರನ್ನು ನೆನೆಯಬೇಕು. ಅವರ ಧ್ಯೇಯೋದ್ದೇಶಗಳ ಸತ್ಪಥಗಾಮಿಗಳಾಗಿದ್ದೇವೆಯೇ ಎಂದು ಆತ್ಮಾವಲೋಕನ ಮಾಡಿಕೊಳ್ಳಬೇಕು.

ನಾಡಿನ ಪುಣ್ಯದ ಪೂರ್ವ ದಿಗಂತಿದೆ ನವ ಅರುಣೋದಯವಾಗುತಿದೆ ಎಂದರು ಕವಿ ಕುವೆಂಪು ಅಂದು. ಆ ಪುಣ್ಯದ ಫಲವನ್ನು ಅನುಭವಿಸುತ್ತಿರುವ ನಾವು ಇಂದು ಏನು ಮಾಡುತ್ತಿದ್ದೇವೆ ಎಂಬ ಪ್ರಶ್ನೆಗೆ ಉತ್ತರ ಹುಡುಕಿಕೊಳ್ಳಬೇಕಲ್ಲವೇ?

'ವಿದ್ಯೆ ಬಂತು, ವಿನಯ ಹೋಯ್ತು; ಬುದ್ಧಿ ಬಂತು, ಶ್ರದ್ಧೆ ಹೋಯ್ತು; ಶ್ರದ್ಧೆ ಬಂತು ವಿವೇಚನೆ ಹೋಯ್ತು, ಸಮೃದ್ಧಿ ಬಂತು ಸಂಸ್ಕೃತಿ ಹೋಯ್ತು, ದೀರ್ಘಾಯುಷ್ಯ ಬಂತು, ಜೀವನ ಸ್ವಾರಸ್ಯ ಹೋಯ್ತು, ಬೋಧನೆ ಬಂತು ಸಾಧನೆ ಹೋಯ್ತು, ಮಾತು ಬಂತು ಕೃತಿಯು ಹೋಯ್ತು, ಜಾತಿ ಬಂತು ಪ್ರೀತಿ ಹೋಯ್ತು, ಸ್ವಾತಂತ್ರ್ಯ ಬಂತು ಸೌಜನ್ಯ ಹೋಯ್ತು' – ಈ ಸಂದರ್ಭದಲ್ಲಿ ಸಿದ್ಧಯ್ಯ ಪುರಾಣಿಕರ ಈ ವಚನದ ಸಾಲುಗಳನ್ನು ಅರ್ಥಮಾಡಿಕೊಂಡು ಅನುಷ್ಠಾನದ ಮಾರ್ಗಾವಲಂಬಿಗಳಾಗಬೇಕಲ್ಲವೆ?

ಸ್ವಾತಂತ್ರ್ಯ ದಿನಾಚರಣೆಯ ಶುಭಾಶಯಗಳು ಎಲ್ಲ ಬಾಂಧವರಿಗೆ.

– ಸಂಪಾದಕ





## ನಿರಾಶೆಯಾಗುತ್ತದೆ

**ಗಾಂ**ಧೀಜಿ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮವನ್ನು ಕಂಡವರಿಗೆ ತುಂಬಾ ನಿರಾಶೆಯಾಗುತ್ತದೆ. ಆ ತ್ಯಾಗ, ಆ ಬಲಿದಾನ, ಆ ಕಷ್ಟಸಹಿಷ್ಣುತೆ, ಆ ನೈತಿಕ ಶ್ರದ್ಧೆ, ಆ ಮೌಲ್ಯನಿಷ್ಠೆ ಈಗೆಲ್ಲಿದೆ? ಗಾಂಧೀಜಿಯ ಅನುಯಾಯಿಗಳೇ ಅವರು ತೀರಿಕೊಂಡ ನಂತರ ದಾರಿಬಿಟ್ಟರು. ಗಾಂಧೀಜಿಯನ್ನು ನೋಡಿಲ್ಲದ, ಅವರ ಕೃತಿಗಳನ್ನರಿಯದ ಈಗಿನ ರಾಜಕಾರಣಿಗಳಿಗೆ ಧರ್ಮದ ಭಯವೂ ಇಲ್ಲ, ನೈತಿಕ ಶ್ರದ್ಧೆಯೂ ಇಲ್ಲ. ಜಾತಿಯ ಮೇಲೆ ಜಾತಿಯನ್ನೆತ್ತಿ ಕಟ್ಟಿ, ವ್ಯಕ್ತಿಯ ಮೇಲೆ ವ್ಯಕ್ತಿಯನ್ನೆತ್ತಿ ಕಟ್ಟಿ, ಅಧಿಕಾರ ಗಿಟ್ಟಿಸುವುದೇ, ಸಮಾಜವನ್ನು ಸುಲಿದು ಹಣ ಗಳಿಸುವುದೇ ರಾಜಕಾರಣಿಗಳ ನಿತ್ಯ ಕರ್ಮವಾಗಿದೆ. ಎಲ್ಲೆಲ್ಲಿಯೂ ಭ್ರಷ್ಟಾಚಾರ, ಅತ್ಯಾಚಾರ, ಅಪಪ್ರಚಾರಗಳು ನಗ್ನ ನೃತ್ಯದಲ್ಲಿ ತೊಡಗಿವೆ. ಗಾಂಧೀಜಿ ಇನ್ನೂ ಹತ್ತು ವರ್ಷ ಬದುಕಿದ್ದರೆ, ಲಾಲ್ ಬಹದ್ದೂರ್ ಶಾಸ್ತ್ರಿಯವರು ಹತ್ತು ವರ್ಷ ರಾಜ್ಯಭಾರ ನಡೆಸಿದ್ದರೆ ಇಂಡಿಯಾ ದೇಶದ ಪರಿಸ್ಥಿತಿಯೇ ಬದಲಾಗುತ್ತಿತ್ತು.

........ ಮಠಗಳು ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕೇಂದ್ರಗಳು. ರಾಜಕೀಯ ಸಗಣಿಯಲ್ಲಿ ತೊಡಗಿಕೊಂಡ ಮಠಗಳು ಆಧ್ಯಾತ್ಮಿಕ ಕೇಂದ್ರಗಳಾಗಿ ಉಳಿಯುವುದಿಲ್ಲ. ದೇಶದ ಸಮಾಜದ ಹಿತದೃಷ್ಟಿಯಿಂದ ಮಠಗಳು ಬೀದಿಗಿಳಿಯಬಾರದು. ಅಂದ ಮೇಲೆ ಭ್ರಷ್ಟಾಚಾರವನ್ನು ನೈತಿಕ ಪತನವನ್ನು ನೋಡಿಕೊಂಡು ತೆಪ್ಪಗಿರಲಾಗದು. ರಚನಾತ್ಮಕ ಕಾರ್ಯಕ್ರಮಗಳ ಮೂಲಕ, ಉತ್ಸವಗಳ ಮೂಲಕ, ಯುವಕರ ಶಿಕ್ಷಣದ ಮೂಲಕ, ಭಾಷಣ ಪ್ರವಚನಗಳ ಮೂಲಕ, ವಿಶೇಷವಾಗಿ ಧ್ಯಾನ ಪ್ರಾರ್ಥನೆ ತಪಶ್ಚರ್ಯದ ಮೂಲಕ ಮೌನವ್ರತದ ಮೂಲಕ ನೈತಿಕ, ಧಾರ್ಮಿಕ ವಾತಾವರಣವನ್ನು ನಿರ್ಮಾಣ ಮಾಡಬಹುದೆಂಬ ವಿಶ್ವಾಸ ನನಗಿದೆ.

(ಕೃಪೆ : ಸಿದ್ಧಗಂಗೆಯ ಶಿವನಿಧಿ– ಡಾ. ದೇಜಗೌ– ಪುಟ ೮೭–೮೮ ಪ್ರಕಾಶನ – ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು (ರಿ,) ಅನಿಕೇತನ ರಸ್ತೆ, ಕುವೆಂಪುನಗರ, ಮೈಸೂರು).

# ಶ್ರೀ ಸಿದ್ಧಲಿಂಗೇಶ್ವರ ವಚನ



*ಹರಿವ ನೀರ ಮಧ್ಯದಲ್ಲಿ*
*ಉರಿವ ಜ್ಯೋತಿ ಬೆಳಗ ನೋಡಿ ಕಂಡೆನಯ್ಯಾ*
*ಸಾರಿರ್ದು ನೋಡಿದರೆ ನೀರೊಳಗೆ ಮುಳುಗಿ ಉರಿವೃತ್ತಿಗೆ ನೋಡಾ*
*ದೂರದಲ್ಲಿರ್ದು ನೋಡಿದರೆ ನೀರ ಮೇಲೆ ಉರಿ ತುತ್ತಿಗೆ ನೋಡಾ ಇದೇನೋ ಇದೇನೋ !*
*ಜ್ಯೋತಿಯ ಗುಣವೊ ತನ್ನ ಭ್ರಾಂತಿಯ ಗುಣವೋ ಎಂದು,*
*ಸ್ವಯಜ್ಞಾನಗುರುವಿನ ಮುಖದಿಂದ ವಿಚಾರಿಸಲು*
*ಹರಿವ ನೀರು ಬತ್ತಿತ್ತು ಜ್ಯೋತಿ ಉಳಿಯಿತ್ತು*
*ಆ ಉಳಿದ ಉಳಿಮೆಯ ತಾನೆಂದು ಉಳಿದಾತನಲ್ಲದೆ*
*ಶಿವಶರಣನಲ್ಲ ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಸಕಲ ಪ್ರಪಂಚಿನೊಳಗೆ ಕೂಡಿ ಚರಿಸುವ ಮನೋಮಧ್ಯದಲ್ಲಿ ಪ್ರಕಾಶಿಸುವ ಸ್ವಯಂಜ್ಯೋತಿಯ ಪ್ರಕಾಶವನು ನಿರೀಕ್ಷಣೆಯ ಮಾಡಿ ಅರಿದೆನಯ್ಯಾ ಮನೋಪ್ರಪಂಚದೊಡನೆ ಕೂಡಿ ನಿರೀಕ್ಷಣೆ ಮಾಡಿದರೆ ಮನೋಪ್ರಪಂಚದಲ್ಲಿ ಮಗ್ನವಾಗಿ ಮಗ್ನವಾಗಿ ಬೆಳಗುತ್ತಿದೆ ಕಂಡಾ. ಮನೋಪ್ರಪಂಚಿಗೆ ವಿಲಕ್ಷಣವಾಗಿ ನಿರೀಕ್ಷಣೆಯ ಮಾಡಿದರೆ ಮನೋಪ ಪ್ರಪಂಚವನು ಒಳಕೊಂಡು ಪ್ರಭಾವಿಸುವಂಥದು ಜ್ಞಾನಜ್ಯೋತಿಯ ನಡಾವಳಿಯೊ, ಜೀವಭಾವದ ಭ್ರಮಣೆಯ ನಡಾವಳಿಯೊ ಹೀಗೆಂದು ಸ್ವಾತ್ಮಜ್ಞಾನ ಸ್ವರೂಪವಾದ ಶ್ರೀ ಗುರುನಾಥನ ದೀಕ್ಷತ್ರಯಂಗಳ ವದನದಿಂದ ಜ್ಞಾನದಿಂದ ಪರಾಂಬರಿಸಲು ಸಕಲ ಪ್ರಪಂಚಿನೊಡನೆ ಕೂಡಿ ಚರಿಸುವ ಮನೋಪ್ರಪಂಚು ಅರತಿತ್ತು. ಜ್ಞಾನಜ್ಯೋತಿಯು ಅವಶೇಷಿತವಾಯಿತ್ತು. ಅವಶೇಷಿತನಾದ ಜ್ಞಾನವೇ ಅರಿದಾತನಲ್ಲದೆ ಶಿವಶರಣನಲ್ಲ ಕಂಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ : ತೋಂಟದಾರ್ಯ ವಚನ ವ್ಯಾಖ್ಯೆ - ಸಂಪಾದಕರು - ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು - ಕುಣಿಗಲ್ ತಾಲ್ಲೂಕು)

# ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ಲಿಂಗಪ್ರಭೆಯೊಳಗಿರುವ ಜಂಗಮ ಶಿವಘನವೆ
ಜಗದ ಜಂಜಡ ಕಳೆವ ಮಹಾಪ್ರಭೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹವ ಜನಜನಿತ ಮಾಡಿದ ಶ್ರೀಗುರುವೆ
ದಾಸೋಹವೆ ಜೀವಾಳವೆನಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರ್ಚಿಸಲು ನಾನರಿಯೆ ಪೂಜಿಸಲು ನಾನರಿಯೆ
ನೆನಹಿನೊಳು ಅವಾಗಳು ನೆನೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ರೂಪವನಂತನ ಏಕಮಾಡಿಕೊಟ್ಟೆ
ನಾಮವಂತನ ಏಕಿಸುತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನೋಡಿದ ಮೇಲೆ ಮತ್ತೇನ ನೋಡಲಿ
ನಿಮ್ಮ ಕೇಳಿದ ಮೇಲೆ ಮತ್ತೇನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏನನರಿತರೆ ಏನು? ಏನ ಕೇಳಿದರೇನು?
ನಿಮ್ಮನರಿಯದ ತನಕ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಮಯಾಚಾರಿ ಗುರುವೆ ನಿಯಮಾಚಾರಿ ಗುರುವೆ
ಆಚಾರದ ಆಚಾರ್ಯ ನೀ ಗುರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದಸ್ತುತಿನಿಂದೆಗಳ ಲಿಂಗವೆಂದೇನಂಬಿ
ಜಗದ ಸುಳಿಗಳೊಳಗೆ ತೇಲಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕುರುವಿರಲಿ ಜ್ವರವಿರಲಿ ನೆಗಡಿ ಮುಕ್ಕಳಿಸಿರಲಿ
ಉರಿ ಬಾವು ತೋರದೆ ನಡೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣರ ತೋರೆನಗೆ ಶರಣರಲಿರಿಸೆನ್ನ
ಶರಣರ ಸೇವೆಗೆ ತೊಡಗಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಆಧ್ಯಾತ್ಮ ಪ್ರವಚನ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ನಿಸರ್ಗವು ನಮಗೆಲ್ಲ ಅಪರೂಪದ ಬದುಕನ್ನು ಕರುಣಿಸಿದೆ. ನಾವು ಬಯಸಿದರೆ ಅದನ್ನು ಸುಂದರವೂ ಸುಮಧುರವೂ ಮಾಡಿಕೊಳ್ಳಬಹುದು. ಇಲ್ಲದಿದ್ದರೆ ಅದೇ ಬದುಕು ಕುರೂಪವೂ ಕಹಿಯೂ ಆಗಿಬಿಡಬಹುದು. ಇದೊಂದು ಸುಂದರ ದೇಹ. ಅದರ ಒಳಗೊಂದು ಸಮರ್ಥ ಮನಸ್ಸು. ಹಲವು ದಶಕಗಳವರೆಗೆ ಈ ದೇಹವು ಕ್ರಿಯಾಶೀಲ. ಮನವು ಅಷ್ಟೇ ಅನುಭವಶೀಲ, ಕ್ರಿಯಾಶೀಲ ದೇಹ, ಅನುಭವಶೀಲ ಮನಸ್ಸು ಇವೆರಡರ ಸುಂದರ ಸಮ್ಮಿಶ್ರಣವೇ ಬದುಕು. ಮನಸ್ಸು ಸುಂದರವಾದರೆ ನಮ್ಮ ಕಾರ್ಯಗಳು ಸುಂದರ ಬದುಕೂ ಸುಂದರ!!

ನೈಸರ್ಗಿಕವಾಗಿ ನಮ್ಮ ದೇಹ ಸುಂದರವಾಗಿರಬಹುದು ಅಥವಾ ಸುಂದರವಾಗಿರದೆ ಇರಬಹುದು. ದೇಹ ಸುಂದರವಾಗಿದ್ದ ಮಾತ್ರಕ್ಕೆ ಬದುಕು ಸುಂದರವಾಗಿರುತ್ತದೆ ಎಂದು ಹೇಳಲಾಗದು. ದೇಹ ಕುರೂಪವಾಗಿದ್ದರೂ ಬದುಕು ಸುಂದರವಾಗಿಸಿಕೊಂಡವರು ಸಾಕಷ್ಟು ಜನರಿದ್ದಾರೆ. ಜಗತ್ಪ್ರಸಿದ್ಧ ತತ್ತ್ವಜ್ಞಾನಿ ಸುಕರಾತನ ದೇಹ ಅಷ್ಟೇನು ಸುಂದರವಾಗಿರಲಿಲ್ಲ. ಅವನ ಬದುಕು ಸುಂದರತಿ ಸುಂದರವಾಗಿತ್ತು. ಆತನ ವಿಚಾರಗಳು ಅತ್ಯಂತ ಉದಾತ್ತವಾಗಿದ್ದವು. ಅಥೆನ್ಸ್ ಪಟ್ಟಣದ ಯುವ ಜನರೆಲ್ಲ ಆತನ ವಿಚಾರಗಳನ್ನು ಮಂತ್ರಮುಗ್ಧರಾಗಿ ಕೇಳುತ್ತಿದ್ದರು. ಒಂದು ದಿನ ಒಬ್ಬ ವ್ಯಕ್ತಿ ಸುಕರಾತನ ಪತ್ನಿಯಾದ ಝಾಂತಿಪಿಗೆ ಕೇಳಿದ. 'ಅಪ್ರತಿಮ ಸುಂದರಿಯಾದ ನೀನು ಇಂಥ ಕುರೂಪ ಮನುಷ್ಯನನ್ನು ಏಕೆ ಮದುವೆಯಾದೆ?' 'ನಾನು ವಿವಾಹವಾದುದು ಆತನ ಮುಖವನ್ನು ನೋಡಿಯಲ್ಲ; ಆತನ ಬದುಕನ್ನು ನೋಡಿ!' ಎಂದು ಝಾಂತಿಪಿ ಹೇಳಿದಳು.

ಈ ಜಗತ್ತಿನಲ್ಲಿ ಸುಂದರ ದೇಹದ ಸುಂದರ ಮುಖದ ಜನ ಸಾಕಷ್ಟು, ಆದರೆ ಸುಂದರ ಹೃದಯದವರು, ಮನದವರು ಎಷ್ಟು ಜನ? ನಮ್ಮ ಮನಸ್ಸು, ಭಾವ-ವಿಚಾರಗಳು ಸುಂದರವಾದರೆ ಬದುಕೇ ಸುಂದರ. ಆಗ ನಮ್ಮ ಜೀವನದಲ್ಲಿ ಶಾಂತಿ ಸಮಾಧಾನಗಳು ತುಂಬಿ ತುಳುಕುತ್ತವೆ. ಅದು ಜೀವನಯೋಗ! ಲಕ್ಷ ಲಕ್ಷ ಹಣ ವ್ಯಯಿಸಿ ಮನೆ-ಮಾರು, ಊರು-ಕೇರಿಗಳನ್ನು ಸುಂದರಗೊಳಿಸುವುದು ನಾವು ಬಲ್ಲೆವು. ಆದರೆ ನಮ್ಮ ಬದುಕನ್ನು ಸುಂದರಗೊಳಿಸಲು ಅರಿತವರು ಕಡಿಮೆ. ಜೀವನಯೋಗದಿಂದ ನಮ್ಮ ಬದುಕು ಕಾಸಿನ ಖರ್ಚಿಲ್ಲದೆ ಸರ್ವಾಂಗ ಸುಂದರವಾಗಬಲ್ಲುದು.

ಶಬ್ದಾದಿ ವಿಷಯಗಳಿಂದ ನಮ್ಮ ಮನಸ್ಸರೋವರದಲ್ಲಿ ರಾಗ-ದ್ವೇಷಾದಿ ಭಾವನೆಗಳ ತೆರೆಗಳು ಏಳುತ್ತವೆ. 'ಋತಂಭರಾ' ಎಂದರೆ ಪರಮ ಸತ್ಯದ ಪ್ರಜ್ಞೆಯಿಂದ ತುಂಬಿಕೊಳ್ಳುವುದೇ ಯೋಗ. ಅದರಿಂದ ನಮ್ಮ ಮನದಲ್ಲಿಯ ರಾಗ-ದ್ವೇಷಾದಿ ಭಾವನೆಗಳು ವಿಚಾರಗಳು ಅಡಗುತ್ತವೆ. ಜೀವನದಲ್ಲಿ ಶಾಂತಿ-ಸಮಾಧಾನಗಳು ನೆಲೆಸುತ್ತವೆ. ಅದು ಆಧ್ಯಾತ್ಮ ಪ್ರಸಾದ, ಜೀವನಯೋಗ!

ಇಲ್ಲೊಂದು ಗುಲಾಬಿ ಹೂವಿನ ಕಂಟಿ ಇದೆ. ನಮಗೆ ಸುಗಂಧಭರಿತ ಸುಂದರ ಗುಲಾಬಿ ಹೂವು ಬೇಕೆನಿಸುತ್ತದೆ. ಅದು ರಾಗ, ಆ ಹೂವಿಗೆ ಜನ್ಮವಿತ್ತ ಮುಳ್ಳಿನ ಕಂಟಿ ಮಾತ್ರ ಬೇಡವೆನಿಸುತ್ತದೆ, ಅದು ದ್ವೇಷ. ಆದರೆ ಅವೆರಡರಲ್ಲಿ, ಹೂ-ಗಂಟಿಯಲ್ಲಿ, ಹರಿಯುವ ಜೀವದ್ರವ್ಯ, ಪ್ರಾಣ ಒಂದೇ ಆಗಿದೆ. ಇದರ ಅರಿವು ನಮಗಾದಾಗ ರಾಗ-ದ್ವೇಷದ ಪ್ರಶ್ನೆಯೇ ಉಳಿಯುವುದಿಲ್ಲ. ಹೂ-ಮುಳ್ಳು ಕಣ್ಣಿಗೆ ಕಾಣುತ್ತದೆ. ಆದರೆ ಅವುಗಳಲ್ಲಿರುವ ಪ್ರಾಣ ಅಥವಾ ಪರಮ ಸತ್ಯವು ಅಗೋಚರ. ಅದನ್ನು ಈ ಚರ್ಮ ಚಕ್ಷುವಿನಿಂದ ಕಾಣಲಾಗದು. ಋತಂಭರಾ ಪ್ರಜ್ಞಾಯುಕ್ತ ಮನೋಗಣ್ಣಿನಿಂದ ಅರಿತು ಅನುಭವಿಸಬೇಕು!

*ನೈಷ ಮತಿರಾಪನೇಯಾ ತರ್ಕೇಣ*
*ನ ಪ್ರವಚನೇನ ಲಭ್ಯಃ ನ ಮೇದಯಾ. ನ ಬಹುನಾಶ್ರುತೇನ*

ಸಕಲ ಜೀವರಾಶಿಗಳಲ್ಲಿರುವ ಪರಮಸತ್ಯ ಪರಮಾತ್ಮನು ನಮ್ಮ ಬುದ್ಧಿಗೆ, ತರ್ಕ-ವಿತರ್ಕಕ್ಕೆ, ಶಬ್ದ ಜಾಲಕ್ಕೆ ಸಿಲುಕುವನಲ್ಲ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಅವನು ಕೇವಲ ಅನುಭವಗಮ್ಯ. ಪರಿಮಿತ ಸಂಖ್ಯೆಗಳ ಮೌಲ್ಯಮಾಪನ ಮಾಡಬಹುದು. ಆ ಎಲ್ಲ ಸಂಖ್ಯೆಗಳ ಆದಿಯಾದ ಶೂನ್ಯವನ್ನು ಅಂತ್ಯವಾದ ಅನಂತದ ಮೌಲ್ಯಮಾಪನ ಮಾಡಲಾಗದು. ಅಂಕಗಣಿತದ ಎಲ್ಲ ಅಂಕಿಗಳನ್ನು ನಾವು ಎಣಿಸಿ, ಗುಣಿಸಿ, ಕೂಡಿ-ಕಳೆದು ಅವುಗಳ ಮೌಲ್ಯವನ್ನು ಗುರುತಿಸಬಹುದು. ಆದರೆ ಆ ಎಲ್ಲ ಅಂಕಿ-ಸಂಖ್ಯೆಗಳ ಆದಿಯೂ ಅಂತ್ಯವೂ ಆದ ಶೂನ್ಯದ ಬೆಲೆಯನ್ನು ನಾವು ಕಟ್ಟಲಾರೆವು. ಅದರ ಸ್ವರೂಪವು ಏನೆಂದು ಹೇಳಲಾರೆವು ಹಾಗೆಯೇ ಈ ಪ್ರಪಂಚದಲ್ಲಿರುವ ಎಲ್ಲ ವಸ್ತುಗಳ ಮೌಲ್ಯಮಾಪನ ನಾವು ಮಾಡಬಲ್ಲೆವು. ಆದರೆ ಈ ಪ್ರಪಂಚದ ಆದಿಯಲ್ಲಿಯೂ ಅಂತ್ಯದಲ್ಲಿಯೂ ಇರುವ ಪರಮಸತ್ಯ ಪರಮಾತ್ಮನ ಸ್ವರೂಪವು ಏನೆಂದು ನಾವು ಹೇಳಲಾರೆವು. ಪರಿಶುದ್ಧ ಹೃದಯದ ನಿಷ್ಕಲ್ಮಶ ಭಾವದ ನಿಜ ಸಂತರು ಮಾತ್ರ ಇವನನ್ನು ಅರಿತು ಅನುಭವಿಸಿ, ಆನಂದಿಸುತ್ತಾರೆ!

ಮೈಕೆಲ್ ಎಂಜೆಲೊ ಜಗತ್‌ಪ್ರಸಿದ್ಧ ಕಲಾವಿದ. ಇಟಲಿ ದೇಶದ ಫ್ಲಾರೆನ್ಸ್ ಪಟ್ಟಣದಲ್ಲಿ ವಾಸ. ಒಂದು ದಿನ ಮನೆಯಿಂದ ಹೊರಬಿದ್ದು ದಾರಿ ಹಿಡಿದು ಹೊರಟಿದ್ದಾನೆ. ದಾರಿಯ ಪಕ್ಕದಲ್ಲಿ ಒಂದು ಸಿರಿವಂತರ ಮನೆ. ಆ ಮನೆಯ ಕಾಂಪೌಂಡದ ಮೂಲೆಯಲ್ಲಿ ಬಿದ್ದಿದ್ದ ಒಂದು ದೊಡ್ಡ ಕಲ್ಲು ಮೈಕಲ್ಲಿಗೆ ಕಂಡಿತು. ತಕ್ಷಣ ಆತನ ಕಣ್ಣುಗಳು ಅರಳಿದವು. ಯಾವುದೋ ಪೂರ್ವದ ನಿಧಿಯೇ ದೊರೆತಷ್ಟು ಹರ್ಷ!

ಆ ಮನೆಯ ಮಾಲೀಕನನ್ನು ಕಂಡು ಮೈಕೆಲ್ ಕೇಳಿದ, 'ದಯವಿಟ್ಟು ಆ ಕಲ್ಲನ್ನು ನನಗೆ ಕೊಡುವಿರಾ?' ಆಶ್ಚರ್ಯಚಕಿತನಾದ ಮಾಲೀಕ ಹೇಳಿದ 'ನಿರುಪಯುಕ್ತವಾದ ಆ ಕಲ್ಲನ್ನೇಕೆ? ಬೇರೆ ಏನಾದರೂ ಬೇಡು ಕೊಡುವೆ!' ಮೈಕೆಲ್ ಹೇಳಿದ 'ನನಗೆ ಬೇರೆ ಇನ್ನೇನೂ ಬೇಡ. ಈ ಕಲ್ಲೊಂದೇ ಸಾಕು' ಈತನು ಮರುಳನಾಗಿರಬಹುದು ಎಂದು ಭಾವಿಸಿ 'ಆಗಲಿ ನೀನು ಈ ಕಲ್ಲನ್ನು ಒಯ್ಯಬಹುದು' ಎಂದು ಆ ಮನೆಯ ಮಾಲೀಕ ಹೇಳಿದ.

ಆ ಕಲ್ಲನ್ನು ತಂದು, ಕೈಯಲ್ಲಿ ಛಾಣವನ್ನು ಹಿಡಿದು ಕಲಾತಪಸ್ವಿ ಮೈಕೆಲ್ ಮಗ್ನನಾದ. ವರುಷಗಳೇ ಉರುಳಿದವು ಒಂದು ದಿನ ಅದೇ ಕಲ್ಲಿನಲ್ಲಿ ಡೆವಿಡ್‌ನ ಅಪ್ರತಿಮ ಮೂರ್ತಿ ಮೂಡಿನಿಂದಿತ್ತು! ಇಡೀ ಜಗತ್ತೇ ಅದನ್ನು ನೋಡಬಂದಿತ್ತು!

ಆ ಕಲ್ಲನ್ನು ಕೊಟ್ಟಿದ್ದ ಸಿರಿವಂತನು ಈ ಮೂರ್ತಿಯನ್ನು ಕಂಡು ಸಂತಸಗೊಂಡ. ಆದರೆ ಇದು ತನ್ನ ಮನೆಯ ಕಲ್ಲಿನಲ್ಲಿಯೇ ಅರಳಿದ ಕಲಾಕುಸುಮ ಎಂದು ಆತನು ಅರಿತಿರಲಿಲ್ಲ. 'ಅನಂತ ಹಾರ್ದಿಕ ಧನ್ಯವಾದಗಳು!' ಎಂದು ಹೇಳಿ ಸಿರಿವಂತನು ಮೈಕೆಲ್‌ರ ಕೈಕುಲುಕಿದ. ಆಗ ಮೈಕೆಲ್‌ರು ಹೇಳಿದರು 'ಧನ್ಯವಾದ ಹೇಳಬೇಕಾದವರು ನೀವಲ್ಲ, ನಾನು!' ಮತ್ತಷ್ಟು ಚಕಿತನಾದ ಸಿರಿವಂತ 'ಅದೇಕೆ?' ಎಂದು ಕೇಳಿದ. 'ಅಂದು ನೀವು ನಿಮ್ಮ ಮನೆಯ ಕಾಂಪೌಂಡ್‌ನಲ್ಲಿದ್ದ ಕಲ್ಲನ್ನು ಕೊಡದಿದ್ದರೆ ನಾನೆಲ್ಲಿ ಈ ಮೂರ್ತಿಯನ್ನು ಕೆತ್ತುತ್ತಿದ್ದೆ!' ಕಲ್ಲಿನಲ್ಲಿ ಹುದುಗಿದ್ದ ಕಲಾ ಕುಸುಮವು ಮೈಕೆಲ್‌ರಿಗೆ ಕಂಡಿತ್ತು. ಸಿರಿವಂತನಿಗೆ ಕಂಡಿರಲಿಲ್ಲ.

ಪ್ರಜ್ಞಾನೇತ್ರದಿಂದ, ಪರಿಶುದ್ಧ ಮನದಿಂದ ನೋಡಿದರೆ ಎಲ್ಲೆಲ್ಲಿಯೂ ಆ ಪರಮಸತ್ಯವೇ ತುಂಬಿಕೊಂಡಿದೆ. ನಮ್ಮಲ್ಲಿ ಈ ಮನೋಗಣ್ಣು ಅರಳಿ ನಿಂತಾಗ ಸಿರಿತನ-ಬಡತನ, ಮೇಲು-ಕೀಳು, ಒಳಿತು-ಕೆಡಕು ಎಲ್ಲ ಭೇದಭಾವ ಮರೆ! ಎತ್ತತ್ತ ನೋಡಿದಡೆ ಅತ್ತತ್ತ ನೀನೇ ದೇವಾ! ಆಗ ನಮ್ಮ ಮನೆಯಲ್ಲಿ ಮಮತೆಯ ಮಾತೆ ಕೊಡುವ ಒಂದು ಬಟ್ಟಲ ಹಾಲು ಪಂಚಪಕ್ವಾನ್ನ, ಗುಡಿಸಲೇ ಅರಮನೆ. ಗಂಜಿಯು ಪಂಚಾಮೃತ. ಪರಿಶುದ್ಧ ಮನದಲ್ಲಿ ಪರಮಸತ್ಯವು ತನಗೆ ತಾನೇ ಪ್ರಕಟವಾಗುತ್ತದೆ. ಆಗ ರಾಗ-ದ್ವೇಷಾದಿಗಳು ಅಳಿದು ಮನದಲ್ಲಿ ಪರಮಶಾಂತಿಯು ನೆಲೆಗೊಳ್ಳುತ್ತದೆ. ಅದು 'ಅಧ್ಯಾತ್ಮ ಪ್ರಸಾದ!' ಅದರಿಂದ ಈ ಜಗತ್ತು, ಜೀವನ. ಎಲ್ಲವೂ 'ಸತ್ಯಂ-ಶಿವಂ-ಸುಂದರಂ!' ಅದೇ ಜೀವನಯೋಗ!! ❑







# ಅನರ್ಘ್ಯರತ್ನ ಅಮರಜೀವಿ ಕಲಾಂಗೆ ಸಲಾಂ!

- ಬಿ.ಎಂ. ಪರಮೇಶ್ವರಪ್ಪ*

೨೦೧೫ನೇ ಜುಲೈ ೨೭ರ ಸಂಜೆ ಭಾರತೀಯರ ಪಾಲಿಗೆ ಕಹಿ ನೆನಪಿನ ಕತ್ತಲೆಯ ದಿನ. ವಿಶ್ವಾದ್ಯಂತ ಕಹಿ ಸುದ್ದಿ ಕನಸಿನಲ್ಲಿ ಕೇಳಿದಂತಾಗಿತ್ತು. ಅದರಲ್ಲೂ ಭಾರತೀಯರಿಗೆ ಬರಸಿಡಿಲು ಬಡಿದಂತಾಗಿತ್ತು. ಕಾರಣ ಮಾನವತೆಯ ಮೇರುಪರ್ವತದ ಪ್ರತೀಕವಾಗಿದ್ದ ಭಾರತದ ಅನರ್ಘ್ಯರತ್ನ ಡಾ. ಅಬ್ದುಲ್ ಕಲಾಂ ಅವರು ಇಹಲೋಕದ ಯಾತ್ರೆ ಮುಗಿಸಿದ್ದರು. ಅದೊಂದು ಮನುಕುಲಕ್ಕೆ ತುಂಬಲಾರದ ಅಪಾರ ನಷ್ಟವಾಗಿತ್ತು.

ಸ್ವರ್ಗದಲ್ಲಿ ಹುಟ್ಟಿ, ಆಕಾಶದಲ್ಲಿ ಬೆಳೆದು, ಗಾಳಿಯಲ್ಲಿ ತೂರಿ ಹಾರಿಹೋಗುವ ದೇವತಾಪುರುಷರ ಜೀವನಚರಿತ್ರೆ ಇಂದಿನ ಸಮಾಜಕ್ಕಾಗಲಿ, ದೇಶಕ್ಕಾಗಲಿ, ಮನುಕುಲಕ್ಕಾಗಲಿ ಯಾವ ಪ್ರಯೋಜನವೂ ಆಗಲಾರದು. ಆದರೆ ಸಾಮಾನ್ಯರಂತೆ ಹುಟ್ಟಿ, ಸಾಮಾನ್ಯರಂತೆ ಬೆಳೆದು ತಮ್ಮ ಸಾಧನೆಯ ಬಲದಿಂದ, ತಮ್ಮ ಪ್ರಯತ್ನದ ಫಲದಿಂದ ಆಕಾಶದೆತ್ತರಕ್ಕೇರಿ ಜನಮಾನಸದಲ್ಲಿ ಸದಾ ನೆಲೆಸಿರುವವರ ಬದುಕು ಮಾನವ ಕುಲಕ್ಕೆ ಬೇಕಾಗಿದೆ. ಇದಕ್ಕೆ ಮಹಾನ್ ಸಾಕ್ಷಿಯಾಗಿದ್ದಾರೆ ಲಿಂಗೈಕ್ಯ 'ಅವೂಲ್ ಪಕೀರ್ ಜೈನಾಲುಬ್ದೀನ್ ಅಬ್ದುಲ್ ಕಲಾಂ' ಇಂತಹವರನ್ನು ಕಂಡೆ ಏನೂ ಗೆರಾಲ್ಡ್ ವೇ ಹೇಳುವುದು Heroes are ordinary people who made themselves extraordinary ಇನ್ನು ಅವರ ಸಾಧನೆಯ ನೆನಪು ಮಾತ್ರ ನಮ್ಮ ಮುಂದಿದೆ.

ಅವರು ಜನರ ಕಣ್ಣಿಗೆ ಸೂಟುಬೂಟುಧಾರಿ ಆದರೆ ಒಳಗೆ ನಿಜವಾದ ಸನ್ಯಾಸಿಯಾಗಿದ್ದರು. ಅವರೊಬ್ಬ ವಿಜ್ಞಾನಿ, ತಂತ್ರಜ್ಞ, ತತ್ತ್ವಜ್ಞಾನಿ, ಸದಾ ಅನ್ವೇಷಣೆಯ ವಿದ್ಯಾರ್ಥಿ, ಸರಿಸಾಟಿಯಿಲ್ಲದ ಸರದಾರ, ಸ್ನೇಹಜೀವಿ, ಮಾರ್ಗದರ್ಶಕ, ವಿಶೇಷ ಗೌರವಾನ್ವಿತ ನಾಯಕ, ಮಮತೆಯ ಮಾಸ್ತರು, ಮಹಾಮಾನವತಾವಾದಿ, ಕಾಯಕಜೀವಿ, ಸರಳಜೀವನದ ಸಂತ, ಉನ್ನತ ಆಲೋಚನೆಯ ಮಹಂತ, ಮನುಕುಲದ ಮಹೋನ್ನತಿಯ ಮಾರ್ಗದರ್ಶಕ ಹೀಗೆ ಅವರದು ಮೇರು ವ್ಯಕ್ತಿತ್ವದ ಮಾತುಮನಂಗಳಿಂದತ್ತತ್ತ ಮೀರಿದ ಘನವ ಸಂಪನ್ನ. ಹೀಗೆ ಸರ್ವಸಾಮಾನ್ಯರಾಗಿ ನಾಯಕರಾಗಿದ್ದ ಅಬ್ದುಲ್ ಕಲಾಂ ಅವರ ಮಹಾನ್ ಜೀವನ ಸರ್ವರಿಗೂ ಆದರ್ಶ.

### *ಮಾತೃಹೃದಯದ ಮಗ*

ತಮಿಳುನಾಡಿನ ರಾಮೇಶ್ವರಂನ ಮಣ್ಣಿನ ಗುಣವೋ ಏನೋ ತಂದೆತಾಯಿಗಳ ಜನ್ಮಜನ್ಮಾಂತರದ ಪುಣ್ಯದ ಫಲವೋ ಏನೋ, ಆ ಎರಡು ಪುಣ್ಯವೇ ಹಣ್ಣಾಗಿ ಸೌಭಾಗ್ಯವೆ ಸಿರಿಯಾಗಿ ಮುಂದೆ ಜಗದ್ವಿಖ್ಯಾತಿಯಾಗುವ ಗಂಡುಮಗುವಿಗೆ ೧೯೩೧ರಲ್ಲಿ ಆ ಊರು ಜನ್ಮನೀಡಿತು. ಆ ಮಗವೇ ಅಬ್ದುಲ್ ಕಲಾಂ. ಈ ಮಗುವಿಗೆ ತಂದೆ ತಾಯಿಯಾಗುವ ಭಾಗ್ಯ ಜೈನುಲಾಬ್ದೀನ್ ಮತ್ತು ಆಶೀಮಾ ದಂಪತಿಗಳದಾಗಿತ್ತು. ಎಷ್ಟು ಜನ ತಂದೆ ತಾಯಿಗಳಿಗೆ ಅಂತಹ ಭಾಗ್ಯ ಲಭಿಸತ್ತದೆ. ಆ ಕುಟುಂಬ ಆರ್ಥಿಕವಾಗಿ ಕಡುಬಡತನ. ಅದು ಅವರಿಗೆ ಬಳುವಳಿಯಾಗಿ ಬೆನ್ನಿಗೆ ಹತ್ತಿಕೊಂಡು ಬಂದಿತ್ತು. ಶರಣರು ಹೇಳುವಂತೆ ಮನೆ ನೋಡಾ ಬಡವರು ಮನ ನೋಡಾ ಘನಮನ ಸಂಪನ್ನರು. ತಂದೆ ದಿನಕ್ಕೆ ಕಡಿಮೆಯೆಂದರೆ ಐದುಬಾರಿ ನಮಾಜಿಗೆ ಹೋಗುವುದನ್ನು ತಪ್ಪಿಸುತ್ತಿರಲಿಲ್ಲ. ಅದು ಅವರಿಗೆ ವಿಶೇಷವಾದ ಶಕ್ತಿಯನ್ನು ತಂದುಕೊಟ್ಟಿತ್ತು. ತಾಯಿಯೋ ಅಲ್ಲಾನ ಮೇಲೆ ಅಪಾರವಾದ ನಂಬಿಕೆ. ಆ ಕಾರಣದಿಂದ ಎಂತಹ ಕಷ್ಟ ಬಂದರು ಅವರು ಅಧೀರರಾಗುತ್ತಿರಲಿಲ್ಲ. ಮಕ್ಕಳು ಸಂಸ್ಕಾರಿಗಳಾಗಲೆಂಬ ಉದಾತ್ತ ಬಯಕೆ ಅವಳದಾಗಿತ್ತು. wisemen learns valuable lesson from te difficulties he faces ಎನ್ನುವಂತೆ ಬಡತನ ಕಲಾಂ ಅವರ ಮುಂದಿನ ಬದುಕಿಗೆ ವರವಾಗಿತ್ತು. ಕಲಾಂ ಚಿಕ್ಕ ವಯಸ್ಸಿನಲ್ಲೇ ಮನೆಗೆ ಆರ್ಥಿಕ ಸಹಾಯವಾಗುವಂತಹ ಸಣ್ಣ ಪ್ರಮಾಣದ ದುಡಿಮೆದುನ್ನು ಮಾಡುತ್ತಿದ್ದುದು ತಾಯಿ ಆಶಿಯಮ್ಮಾಗೆ ಮಗನ ಬಗ್ಗೆ ಹೆಚ್ಚಿನ ಅಭಿಮಾನ ಮೂಡಿಸಿತ್ತು. ಕಲಾಂ ಅರ್ಪಿಸಿಕೊಂಡ

* ವಿಶ್ರಾಂತ ಕಾರ್ಯಪಾಲಕ ಅಭಿಯಂತರರು, ಬಾಸೂರು, ಚಿಕ್ಕಮಗಳೂರು ಜಿಲ್ಲೆ.

...ಯಕವೋ ಮುಂಜಾನೆ ನಸುಕಿನಲ್ಲೇ ಎದ್ದು ರೈಲು ನಿಲ್ದಾಣಕ್ಕೆ ಹೋಗಬೇಕು. ಫಾಸ್ಟ್ ಎಕ್ಸ್‌ಪ್ರೆಸ್ ರೈಲಿನಲ್ಲಿ ಪತ್ರಿಕೆಯ ಬಂಡಲ್ ಬರುತ್ತಿತ್ತು. ಆ ರೈಲಿಗೆ ರಾಮೇಶ್ವರಂನಲ್ಲಿ ನಿಲುಗಡೆ ಇರಲಿಲ್ಲ. ಬಂಡಲನ್ನು ಹಾಗೆಯೇ ಪ್ಲಾಟ್ ಫಾರಂಗೆ ಎಸೆಯಲಾಗುತ್ತಿತ್ತು. ಅದನ್ನು ತೆಗೆದುಕೊಂಡು ಕ್ಷಿಪ್ರಗತಿಯಲ್ಲಿ ಮನೆಮನೆಗೆ ತಲುಪಿಸುವ ಕೆಲಸ ಮಾಡಬೇಕಾಗಿತ್ತು. ೮ ಗಂಟೆಯೊಳಗೆ ಬಾಲಕ ಕಲಾಂ ಈ ಕೆಲಸ ಮುಗಿಸಿ ಮನೆಗೆ ಬರುತ್ತಿದ್ದ. ಅನಂತರ ತಾಯಿ ಕೊಡುವ ಉಪಾಹಾರ ತಿಂದು ಶಾಲೆಯೆಡೆಗೆ ಓಡುನಡಿಗೆ. ಕಲಾಂ ಅವರೇ ಹೇಳಿಕೊಂಡಿರುವಂತೆ, ಮಗ ಕಷ್ಟಪಡುತ್ತಾನೆಂಬ ಕಾರಣಕ್ಕೆ ಅವರ ತಾಯಿ ಒಂದು ಮುಷ್ಟಿ ಉಪಾಹಾರವನ್ನು ಹೆಚ್ಚಾಗಿ ಕೊಡುತ್ತಿದ್ದರಂತೆ. ಅಕ್ಕಿಯನ್ನೇ ಜಾಸ್ತಿ ಬಳಸಿದರೂ ಮಕ್ಕಳಿಗೆ ಇಷ್ಟವೆಂದು ಗೋಧಿ ತಂದು ಹಿಟ್ಟು ಮಾಡಿಸಿ ಚಪಾತಿ ಮಾಡಿಕೊಡುತ್ತಿದ್ದರಂತೆ. ಈ ಸಂದರ್ಭದಲ್ಲಿ ಕಲಾಂಗೆ ಒಂದೋ, ಎರಡೋ ಚಪಾತಿ ಹೆಚ್ಚಾಗಿ ಸಿಗುತ್ತಿದ್ದುದು ಗ್ಯಾರಂಟಿ. ಒಮ್ಮೆ ಕಲಾಂ ಅವರ ಅಣ್ಣ ಅವರನ್ನು ಹತ್ತಿರಕ್ಕೆ ಕರೆದು 'ನೋಡು, ತನಗೂ ಇಟ್ಟುಕೊಳ್ಳದೆ ಅಮ್ಮ ಎಲ್ಲವನ್ನು ನಿನಗೇ ಕೊಟ್ಟುಬಿಡುತ್ತಾರೆ' ಎಂಬುದನ್ನು ಗಮನಕ್ಕೆ ತಂದಾಗ **ಕಲಾಂ ಭಾವಪೂರಿತರಾಗಿ ಹೋಗಿ ಅಮ್ಮನನ್ನು ಅಪ್ಪಿ ಕಣ್ಣೀರಿಟ್ಟರಂತೆ.** ಹೀಗೆ ಮಾತೃಧಾರೆಯ ಮೂರ್ತರೂಪ ಕಲಾಂನಲ್ಲಿ ಹೊರ ಹೊಮ್ಮಿ ಅವರ ಭವಿಷ್ಯ ಜೀವನಕ್ಕೆ ಬುನಾದಿಯಾಯಿತು.

### ತಂದೆ ನೀಡಿದ ಸಂಸ್ಕಾರ

ಜ್ಞಾನವಿಲ್ಲದ ಕ್ರಿಯೆ ಬರಡು. ಕ್ರಿಯೆ ಇಲ್ಲದ ಜ್ಞಾನ ಭ್ರಮೆ ಎರಡು ಅಪ್ರಯೋಜಕ. ಆದಕಾರಣ ಸುಜ್ಞಾನ ಸುಕ್ರಿಯೆಗಳ ಸಂಗಮವೆ ಸಂಸ್ಕಾರ ಎಂದರು ಶರಣರು ಅಂತೆಯೆ ಕಲಾಂರಲ್ಲಿ ಧಾರ್ಮಿಕ ಶ್ರದ್ಧೆ ಬೆಳೆಸಲು ತಂದೆ ಚಿಕ್ಕದಿನಿಂದಲೇ ಗಮನ ಕೊಟ್ಟಿದ್ದರು. ಸಂಜೆ ಶಾಲೆ ಮುಗಿದ ನಂತರ ಸ್ವಲ್ಪ ಹೊತ್ತು ಪತ್ರಿಕೆ ಚಂದಾವಸೂಲಿಗೆ ಹೋಗುತ್ತಿದ್ದ ಬಾಲಕ ಕಲಾಂ ನಂತರ ತಂದೆಯೊಡನೆ ನಮಾಜ್ ಮಾಡಲು ತೆರಳುತ್ತಿದ್ದರು. ತಾಯಿಯೂ ಅಷ್ಟೆ. ಮಗನಿಗೆ ಧಾರ್ಮಿಕ ವಿಷಯಗಳನ್ನು ಮನದಟ್ಟು ಮಾಡಿಸುತ್ತಿದ್ದರು. ಪರಿಣಾಮ, ಕಲಾಂಗೆ ಚಿಕ್ಕವಯಸ್ಸಿನಲ್ಲೇ ಉತ್ತಮ ನಡವಳಿಕೆ, ಕಾರ್ಯಶ್ರದ್ಧೆ, ಕಠಿಣ ಪರಿಶ್ರಮ, ಕಾಯಕನಿಷ್ಠೆ, ರಚನಾತ್ಮಕ ವಿಚಾರಗಳ ಚಿಂತನೆ, ಉದಾತ್ತ ಯೋಚನೆಗಳು, ಮಧುರ ಭಾವನೆಗಳು ರಕ್ತಗತವಾಗಿದ್ದವು. ಇಂತಹ ಮಗನನ್ನು ದೇಶಕ್ಕೆ ಅಲ್ಲ! ಮನುಕುಲಕ್ಕೆ ನೀಡಿ ತಂದೆತಾಯಿಗಳು ಧನ್ಯರಾಗಿದ್ದರು. ಇಂತಹ ಭಾಗ್ಯ ದೊರೆಯುವುದು ಕೆಲವರಿಗೆ ಮಾತ್ರ Childrens born with prayer are born to uplift the humanity ಎನ್ನುವುದಕ್ಕೆ ಕಲಾಂ ಸಾಕ್ಷಿಯಾಗಿದ್ದರು.

### ಸಾಧನ ಪಥಕ್ಕೆ ಪ್ರೇರಕರಾದ ಗುರುಗಳು

ಡಾ. ಅಬ್ದುಲ್ ಕಲಾಂರವರು ತಮ್ಮ ಆತ್ಮಚರಿತ್ರೆಯಲ್ಲಿ ಗುರುಗಳ ಬಗ್ಗೆ God showered his grace on me thro some outstanding teachers ಎಂದು ಹೃದಯ ತುಂಬಿ ಸ್ಮರಿಸುತ್ತಾರೆ, ಭಗವಂತನ ಕರುಣೆಗೆ ಕೊನೆಯುಂಟೆ ಎನ್ನುತ್ತಾರೆ.

ಕಲಾಂ ಅವರ ವಿದ್ಯಾಭ್ಯಾಸದ ಅವಧಿ ೧೯೩೬ರಿಂದ ೧೯೫೭. ೧೯೩೬ರ ಸಮಯದಲ್ಲಿ ಕಲಾಂಗೆ ಕೇವಲ ೫ ವರ್ಷ. ಆಗಷ್ಟೇ ಶಾಲೆಯ ಮುಖ ನೋಡಿದ್ದರು. ರಾಮೇಶ್ವರಂ ಪಂಚಾಯತ್ ಎಲಿಮೆಂಟರಿ ಶಾಲೆಯಲ್ಲಿ ವಿದ್ಯಾಭ್ಯಾಸ ಆರಂಭವಾಗಿತ್ತು. ಮುತ್ತು ಅಯ್ಯರ್ ಎಂಬ ಶಿಕ್ಷಕರು ಆ ಶಾಲೆಯಲ್ಲಿದ್ದರು. ಬಾಲಕ ಕಲಾಂರನ್ನು ಕಂಡರೆ ಅವರಿಗೆ ಅಚ್ಚುಮೆಚ್ಚು. ಆತ ವಿದ್ಯಾಭ್ಯಾಸದಲ್ಲಿ ತೋರಿಸುತ್ತಿದ್ದ ಆಸಕ್ತಿಯೇ ಇದಕ್ಕೆ ಪ್ರಮುಖ ಕಾರಣ. ಹೇಳುವುದನ್ನು ಶ್ರದ್ಧೆಯಿಂದ ಕೇಳುತ್ತಿದ್ದ. ಕೇಳಿದ್ದಕ್ಕೆ ಸಮರ್ಪಕವಾಗಿ ಉತ್ತರಿಸುತ್ತಿದ್ದ. ತಂದೆ-ತಾಯಿ ಬಳಿ ಕಲಾಂನನ್ನು ಅವರು ಹೊಗಳಿದ್ದೇ ಹೊಗಳಿದ್ದು! ಇದರಿಂದ ಸಂಪ್ರೀತರಾದ ತಂದೆ ಮಗನಿಗೆ ಇಷ್ಟವಾದ ಸಿಹಿ ತಂದುಕೊಡುತ್ತಿದ್ದರು.

ಐದನೇ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಶಿವಸುಬ್ರಹ್ಮಣ ಅಯ್ಯರ್ ಎಂಬ ಶಿಕ್ಷಕರು ಕಲಾಂ ಮೇಲೆ ಹೆಚ್ಚಿನ ಪ್ರಭಾವ ಬೀರಿದರು. ಅವರು ಶಾಲೆಯಲ್ಲಿ ಒಂದು ದಿನ ಹಕ್ಕಿ ಹೇಗೆ ಹಾರುತ್ತದೆ ಎಂಬುದರ ತಾಂತ್ರಿಕ ವಿಧಾನವನ್ನು ಚಿತ್ರ ಸಮೇತ ಬರೆದು ಸುಮಾರು ಅರ್ಧ ಗಂಟೆ ಕಾಲ ಮಕ್ಕಳಿಗೆ ವಿವರಿಸಿದರು. ಆದರೆ ಮಕ್ಕಳಿಗೆ ಅದು ಅರ್ಥವಾಗಲಿಲ್ಲ. ಕಲಾಂ ಸೇರಿದಂತೆ ಅವರ ಪ್ರಶ್ನೆಗೆ ಯಾರೂ ಸರಿಯಾಗಿ ಉತ್ತರಿಸಲಿಲ್ಲ. ಅಂತಿಮವಾಗಿ ವಿದ್ಯಾರ್ಥಿಗಳು ತಮಗೆ ಏನೂ ಅರ್ಥವಾಗಲಿಲ್ಲವೆಂದು ಹೇಳಿದರು. ಆಗ ಆ ಶಿಕ್ಷಕರು ಸಿಟ್ಟಾಗಲಿಲ್ಲ. ಬೇಸರಪಟ್ಟುಕೊಳ್ಳಲೂ ಇಲ್ಲ. ಎಲ್ಲರನ್ನೂ ಸಮುದ್ರ ತೀರಕ್ಕೆ ಕರೆದುಕೊಂಡು ಹೋದರು. ಅಲ್ಲಿನ ಅಲೆಗಳ ಅಬ್ಬರಕ್ಕೆ ಮಕ್ಕಳಿಗೆ ಖುಷಿಯೋ ಖುಷಿ. ಅಲ್ಲಿ ಎಲ್ಲರನ್ನೂ ಸ್ವಲ್ಪ ಹೊತ್ತು ಆಟವಾಡಲು ಬಿಟ್ಟರು.





ಆನಂತರ ಅಲ್ಲಿ ಹಾರಾಡುತ್ತಿದ್ದ ಹಕ್ಕಿಗಳ ಗುಂಪನ್ನು ತೋರಿಸಿದರು. ಅವು ನೆಲದ ಮೇಲಿನಿಂದ ಹಾರುವಾಗ ಯಾವ ಭಂಗಿಯಲ್ಲಿ ಹಾರುತ್ತವೆ, ಹಾರುವಾಗ ಹೇಗೆ ರೆಕ್ಕೆಯನ್ನು ಬೀಸುತ್ತವೆ ಎಂಬುದನ್ನು ಪ್ರತ್ಯಕ್ಷದರ್ಶನದೊಂದಿಗೆ ವಿವರಿಸಿದರು. ಮುಂದೆ ಅವರು ಏರೋನಾಟಿಕಲ್ ವಿಷಯದಲ್ಲಿ ಇಂಜಿನಿಯರಿಂಗ್ ಪದವಿ ಪಡೆಯಲು, ವೈಮಾನಿಕ ಕ್ಷೇತ್ರದಲ್ಲಿ ಸಾಧನೆ ಮಾಡಲು ಇದುವೇ ಮೂಲ ಪ್ರೇರಣೆಯಾಯಿತು.

ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಕಲಾಂ ಓದುತ್ತಿದ್ದಾಗ ಆ ಕಾಲೇಜಿನಲ್ಲಿ ತೋತಾತ್ರಿ ಅಯ್ಯಂಗಾರ್ ಎಂಬ ಗಣಿತದ ಪ್ರಾಧ್ಯಾಪಕರಿದ್ದರು. ೧೯೫೪ರ ಸಂದರ್ಭ ಅದು. ಒಮ್ಮೆ ಇಡೀ ಕಾಲೇಜಿನಲ್ಲಿ ಉತ್ತಮವಾಗಿ ಓದುತ್ತಿದ್ದ (ಟಾಪ್‌ಟೆನ್) ಹತ್ತು ವಿದ್ಯಾರ್ಥಿಗಳಿಗೆ ಅವರ ಉಪನ್ಯಾಸವನ್ನು ಏರ್ಪಡಿಸಿದ್ದರು. ಅವರು ಹೇಳಿದ್ದನ್ನು ಕಲಾಂ ತಮ್ಮ ಬರವಣಿಗೆಯಲ್ಲಿ ವಿಶೇಷವಾಗಿ ಉಲ್ಲೇಖಿಸಿದ್ದಾರೆ. ಅವರು ಪುರಾತನ ಗಣಿತಜ್ಞರ ಬಗ್ಗೆ ಹೇಳಿದ್ದು ಈಗಲೂ ನನ್ನ ಕಿವಿಯಲ್ಲಿ ಗುಯ್‌ಗುಡುತ್ತಿದೆ. ಆರ್ಯಭಟ, ಶ್ರೀನಿವಾಸ ರಾಮಾನುಜನ್, ಬ್ರಹ್ಮಗುಪ್ತ, ಭಾಸ್ಕರಾಚಾರ್ಯರ ಸಾಧನೆಯನ್ನು ಅವರು ಮನಮುಟ್ಟುವಂತೆ ವಿವರಿಸಿದರು. ಅತ್ಯಂತ ಪ್ರೇರಣಾದಾಯಿ ಉಪನ್ಯಾಸ ಅದು ಎಂದು ಕಲಾಂ ಬರೆದುಕೊಂಡಿದ್ದಾರೆ.

### ಆತ್ಮವಿಶ್ವಾಸ ಜಾಗೃತವಾಯಿತು

೧೯೫೪-೫೭ರವರೆಗೆ ಮದ್ರಾಸ್ ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ (ಎಂಐಟಿ)ಯಲ್ಲಿ ಕಲಾಂ ಇಂಜಿನಿಯರಿಂಗ್ ಮಾಡುತ್ತಿದ್ದಾಗ ಪ್ರೊ. ಶ್ರೀನಿವಾಸನ್ ಎಂಬ ಪ್ರಾಧ್ಯಾಪಕರಿದ್ದರು. ಒಮ್ಮೆ ಕಲಾಂ ನೇತೃತ್ವದಲ್ಲಿ ಆರು ವಿದ್ಯಾರ್ಥಿಗಳಿಗೆ ತಳಮಟ್ಟದಲ್ಲಿ ಆಕ್ರಮಣ ಮಾಡುವ ಏರ್ ಕ್ರಾಫ್ಟ್ ಡಿಸೈನ್ ಮಾಡುವ ಅಸೈನ್‌ಮೆಂಟ್ ನೀಡಿದರು. ಸೂಕ್ತಕಾಲದಲ್ಲಿ ಅದನ್ನು ಸಿದ್ಧಪಡಿಸಿ ತೋರಿಸಿದಾಗ ಪ್ರೊ. ಶ್ರೀನಿವಾಸನ್‌ಗೆ ಸ್ವಲ್ಪವೂ ಸಮಾಧಾನವಾಗಲಿಲ್ಲ. ಕಲಾಂ ರನ್ನು ಕರೆದು ಇನ್ನು ಮೂರು ದಿನದಲ್ಲಿ ಉತ್ತಮವಾದ ಡಿಸೈನ್ ಮಾಡಿ ತೋರಿಸದಿದ್ದಲ್ಲಿ ಸ್ಕಾಲರ್‌ಶಿಪ್ ನಿಲ್ಲಿಸುವುದಾಗಿ ಹೇಳಿದರು. ಕಲಾಂಗೆ ಆಕಾಶವೇ ಕಳಚಿ ಬಿದ್ದಂತಾಯಿತು. ತನ್ನ ಭವಿಷ್ಯದ ಕನಸುಗಳು ನನಸಾಗಬೇಕಾದರೆ ಸ್ಕಾಲರ್‌ಶಿಪ್ ನೆರವು ಅನಿವಾರ್ಯವಾಗಿತ್ತು. ಹಗಲೂ ರಾತ್ರಿ ಎನ್ನದೆ ಕಷ್ಟಪಟ್ಟು ಕಲಾಂ ಅದನ್ನು ಪೂರೈಸಿ ಪ್ರೊಫೆಸರ್‌ಗೆ ತೋರಿಸಿದಾಗ 'ಅತ್ಯುತ್ತಮವಾದ ಕೆಲಸ ನಿನ್ನಿಂದ ಸಾಧ್ಯ ಎಂಬುದು ನನಗೆ ಗೊತ್ತಿತ್ತು' ಎಂದು ಸಂತೋಷದಿಂದ ಬಿಗಿದಪ್ಪಿದರು. ಈ ಘಟನೆ ಕಲಾಂ ಅವರಲ್ಲಿ ಅದಮ್ಯ ಆತ್ಮವಿಶ್ವಾಸವನ್ನು ತುಂಬಿತು.

### ವಿಶಿಷ್ಟ ಸಾಧನೆಯ ವಿಜ್ಞಾನಿಯಾಗಿ

ಕಲಾಂ ಅವರು ಸದಾ ಅನ್ವೇಷಕ ವಿದ್ಯಾರ್ಥಿಯಾಗಿಯೇ ಗುರುತಿಸಿಕೊಂಡವರು. Future is not what we planned for tommarrow. It is the result of what we do today. Do the best ಎಂಬುದು ಅವರ ಅಚಲವಾದ ನಂಬಿಕೆಯಾಗಿತ್ತು, ಅದನ್ನು ಆಚರಿಸಿ ತೋರಿಸಿದರು.

೧೯೮೦ರಲ್ಲಿ ಅವರ ಸಂಶೋಧನೆ ಮತ್ತು ಶೈಕ್ಷಣಿಕ ಮುಂದಾಳತ್ವವು ಅವರಿಗೆ ಬಹುದೊಡ್ಡ ಗೌರವವನ್ನು ತಂದು ಕೊಟ್ಟಿತ್ತು. ಖ್ಯಾತ ಲೋಹವಿಜ್ಞಾನಿ ಹಾಗೂ ರಕ್ಷಣಾ ಸಚಿವರ ವೈಜ್ಞಾನಿಕ ಸಲಹೆಗಾರ ವಿ.ಎಸ್. ಅರುಣಾಚಲಂ ಸಹಯೋಗದಲ್ಲಿ ಅಂದಿನ ರಕ್ಷಣಾ ಸಚಿವ ಆರ್. ವೆಂಕಟರಾಮನ್ ಸೂಚನೆಯಂತೆ ಕಲಾಂ ೩೮೮ ಕೋಟಿ ರೂಪಾಯಿ ವೆಚ್ಚದಲ್ಲಿ ಇಂಟಿಗ್ರೇಟೆಡ್ ಗೈಡೆಡ್ ಮಿಸ್ಸೈಲ್ ಡೆವೆಲಪ್‌ಮೆಂಟ್ ಪ್ರೋಗ್ರಾಂ(ಐಜಿಎಂಡಿಪಿ)ಗೆ ಮುಖ್ಯ ಕಾರ್ಯನಿರ್ವಾಹಕರಾದರು. ಮಧ್ಯಂತರ ಬಾಲಿಸ್ಟಿಕ್ ಕ್ಷಿಪಣಿ 'ಅಗ್ನಿ' 'ಪೃಥ್ವಿ' ಮುಂತಾದುವುಗಳ ತಯಾರಿಕೆಯಲ್ಲಿ ಮಹತ್ವದ ಪಾತ್ರ ವಹಿಸಿದರು. ಕಲಾಂ ಅವರು ೧೯೯೨-೯೯ರವರೆಗೆ ಪ್ರಧಾನಮಂತ್ರಿಗಳ ಪ್ರಧಾನ ವೈಜ್ಞಾನಿಕ ಸಲಹೆಗಾರರು ಮತ್ತು ಡಿಆರ್‌ಡಿಒ ಕಾರ್ಯದರ್ಶಿಯಾಗಿದ್ದರು. ೧೯೯೮ರಲ್ಲಿ ವಾಜಪೇಯ ಸರ್ಕಾರ ವೇಳೆ ನಡೆದ ಪೋಖ್ರಾನ್-೨ರಲ್ಲಿ ಪ್ರಧಾನ ಯೋಜನಾ ಸಮನ್ವಯಾಧಿಕಾರಿಯಾಗಿದ್ದರು.

ಕಲಾಂ ಅವರು ೧೯೫೮ರಲ್ಲಿ ಚೆನ್ನೈನ ಎಂಐಟಿಯಲ್ಲಿ ಗ್ರಾಜುಯೇಟ್ ಆದ ನಂತರ ಕಲಾಂ ಡಿಆರ್‌ಡಿಒದ ಏರೋನಾಟಿಕ್ ಡೆವಲಪ್‌ಮೆಂಟ್ ಎಸ್ಟಾಬ್ಲಿಷ್‌ಮೆಂಟ್‌ನ ಪ್ರಧಾನ ವಿಜ್ಞಾನಿಯಾಗಿ ಸೇರ್ಪಡೆಯಾದರು. ಅಲ್ಲಿ ಭಾರತೀಯ ಸೇನಾಪಡೆಯ ಸಣ್ಣ ಹೆಲಿಕಾಪ್ಟರ್ ಡಿಸೈನ್ ಮಾಡುವ ಮೂಲಕ ತಮ್ಮ ವೃತ್ತಿ ಆರಂಭಿಸಿದ್ದರು. ನಂತರ ಖ್ಯಾತ ಬಾಹ್ಯಾಕಾಶ ವಿಜ್ಞಾನಿ ವಿಕ್ರಂ ಸಾರಾಭಾಯಿ ಅವರೊಂದಿಗೆ ಸಹಾಯಕರಾಗಿ ಕೆಲಸ. ೧೯೬೨ರಲ್ಲಿ ಕಲಾಂ ಇಸ್ರೋಗೆ ವರ್ಗಾವಣೆಗೊಂಡರು. ಅಲ್ಲಿ ಅವರು ಭಾರತದ

ಮೊಟ್ಟಮೊದಲು ಸ್ವದೇಶಿ ನಿರ್ಮಿತ ಉಪಗ್ರಹ ಎಸ್‌ಎಲ್‌ವಿ-೩ ಲಾಂಚ್ ವೆಹಿಕಲ್ ಪ್ರಾಜೆಕ್ಟ್ ಡೈರೆಕ್ಟರ್ ಆದರು. ಇದರಿಂದ ೧೯೮೦ರಲ್ಲಿ ರೋಹಿಣಿ ಉಪಗ್ರಹವನ್ನು ಯಶಸ್ವಿಯಾಗಿ ಉಡಾಯಿಸಲಾಯಿತು.

ಇಸ್ರೋಗೆ ಸೇರ್ಪಡೆಯಾಗಿ ಕಲಾಂ ಜೀವನಕ್ಕೆ ಹೊಸದೊಂದು ತಿರುವು ದೊರೆಯಿತು. ಮೊದಲು ಅವರು ೧೯೬೩ರಲ್ಲಿ ಡಿಆರ್‌ಡಿಓನಲ್ಲಿ ಸ್ವತಂತ್ರವಾಗಿ ಎಕ್ಸ್‌ಪ್ಯಾಂಡಬಲ್ ರಾಕೆಟ್ ಪ್ರಾಜೆಕ್ಟ್‌ನಲ್ಲಿ ಪಾಲ್ಗೊಂಡಿದ್ದರು. ೬೯ರಲ್ಲಿ ಅವರು ಮತ್ತಷ್ಟು ಇಂಜಿನಿಯರ್‌ಗಳನ್ನು ಸೇರಿಸಿಕೊಂಡು ಈ ಯೋಜನೆಯನ್ನು ವಿಸ್ತರಿಸಲು ಸರ್ಕಾರದ ಮಂಜೂರಾತಿ ಪಡೆದರು.

೧೯೬೩-೬೪ರಲ್ಲಿ ಅವರು ಹ್ಯಾಂಪ್ಟನ್ ವರ್ಜೀನಿಯಾದಲ್ಲಿನ ನಾಸಾದ ಲ್ಯಾಂಗ್ಲಿ ರೀಸರ್ಚ್ ಸೆಂಟರ್‌ಗೆ ಭೇಟಿ ನೀಡಿದ್ದರು. ೧೯೭೦-೮೦ರ ಅವಧಿಯಲ್ಲಿ ಕಲಾಂ ಪೋಲಾರ್ ಎಸ್‌ಎಲ್‌ವಿ ಮತ್ತು ಎಸ್‌ಎಲ್‌ವಿ-೩ ಪ್ರಾಜೆಕ್ಟ್‌ಗಳ ಯಶಸ್ಸಿಗೆ ಬಹುವಾಗಿ ಶ್ರಮಿಸಿದರು. ಅವರ ಶ್ರಮಕ್ಕೆ ತಕ್ಕಂತೆ ಈ ಯೋಜನೆಗಳು ಸಂಪೂರ್ಣ ಯಶಸ್ಸು ಸಾಧಿಸಿದವು. ೧೯೭೪ರಲ್ಲಿ ಪ್ರಸಿದ್ಧ ಅಣುವಿಜ್ಞಾನಿ ಡಾ. ರಾಜಾ ರಾಮಣ್ಣ ಅವರು 'ಕಲಾಂರನ್ನು ಪೋಖ್ರಾನ್-೧' 'ಅಣ್ವಸ್ತ್ರ ಪರೀಕ್ಷೆ'ಗೆ ಆಹ್ವಾನಿಸಿದ್ದರು. ೭೦ನೇ ಇಸವಿಯಲ್ಲಿ 'ಪ್ರಾಜೆಕ್ಟ್ ದೇವಿ' ಮತ್ತು 'ಪ್ರಾಜೆಕ್ಟ್ ವ್ಯಾಲಿಯಂಟ್' ಎಂಬ ಎರಡು ಯೋಜನೆಗಳನ್ನು ನಿರ್ದೇಶಿಸಿದರು. ಕೇಂದ್ರ ಸಂಪುಟದಲ್ಲಿ ಒಪ್ಪಿಗೆ ಸಿಗದಿದ್ದರೂ ಆಗಿನ ಪ್ರಧಾನಿ ಇಂದಿರಾಗಾಂಧಿ ಈ ಯೋಜನೆಗಳಿಗೆ ತಮ್ಮ ವಿಶೇಷ ಅಧಿಕಾರ ಬಳಸಿ ಧನಸಹಾಯ ಒದಗಿಸಿದರು.

ಇಷ್ಟೆಲ್ಲಾ ಆಭೂತಪೂರ್ವ ಸಾಧನೆ ಮಾಡಿದ ಕಲಾಂ ಅವರು ಮಿಸೈಲ್‌ಮ್ಯಾನ್ ಎಂದೇ ಪ್ರಖ್ಯಾತರಾದರು. ಅವರು ತಮ್ಮ ಆತ್ಮಚರಿತ್ರೆಯಲ್ಲಿ ನಾನು ಸಣ್ಣವ ಎಂದು ಹೇಳಿಕೊಳ್ಳುವುದು ಹೀಗೆ All these missiles and rockets are of his (God) works through a small person called Kalaam ಬಸವಣ್ಣನವರ ನುಡಿಯಂತೆ ಎನಗಿಂತ ಕಿರಿಯರಿಲ್ಲ ಎನ್ನುವ ಮಾತಿಗೆ ಭಾಷ್ಯ ಬರೆದಂತೆ ಬದುಕಿದ ಮಹಾಚೇತನ ಕಲಾಂ.

### ಆದರ್ಶ ಪ್ರಾಮಾಣಿಕ ರಾಷ್ಟ್ರಪತಿ

೨೦೦೨ರಲ್ಲಿ ವಿಜ್ಞಾನಿಯೊಬ್ಬ ರಾಷ್ಟ್ರದ ಅತ್ಯುನ್ನತ ಪದವಿಗೇರಿದ ದಾಖಲೆ ಹಾಗೂ ಕೀರ್ತಿಗೆ ಭಾಜನರಾದರು. ವಿಶೇಷವೆಂದರೆ ಭಾರತದ ಮೊಟ್ಟ ಮೊದಲ ಅವಿವಾಹಿತ ರಾಷ್ಟ್ರಪತಿ ಡಾ. ಕಲಾಂ ಅವರು ರಾಷ್ಟ್ರಪತಿಯಾದ ನಂತರ ಆ ಪದವಿಗೆ ವಿಶೇಷ ಘನತೆ ಪ್ರಾಪ್ತವಾಯಿತು. ಅಂತರ ರಾಷ್ಟ್ರೀಯ ಮಟ್ಟದಲ್ಲಿ ಅವರು ಪಡೆದಿದ್ದ ಮಾನ್ಯತೆಯಿಂದಾಗಿ ಭಾರತದ ಬಗ್ಗೆ ಹೆಚ್ಚಿನ ಗೌರವ ಮೂಡುವಂತಾಯಿತು. ದೇಶದ ಮೊದಲ ಪ್ರಜೆಯಾದರೂ ಅಹಂ ಅನ್ನುವುದು ಲವಲೇಶವೂ ಅವರಲ್ಲಿ ಇರಲಿಲ್ಲ. Egoism separates man from divinity' the most selfish single alphabet word is 'I' avoid it ಎಂಬುದನ್ನು ಚೆನ್ನಾಗಿ ಅರಿತವರಾಗಿದ್ದರು. ರಾಷ್ಟ್ರಪತಿ ಸ್ಥಾನ ಸ್ವೀಕರಿಸುವ ಸಮಾರಂಭಕ್ಕೆ ತಮ್ಮ ಬಂಧುಗಳನ್ನು ಸ್ವಂತ ಖರ್ಚಿನಲ್ಲಿ ಬರಲು ವ್ಯವಸ್ಥೆ ಮಾಡಿದ್ದರು. ರಾಷ್ಟ್ರಪತಿ ಸ್ಥಾನದಿಂದ ನಿರ್ಗಮಿಸುವಾಗ ಬರುವಾಗ ತಂದ ಒಂದು ಸೂಟ್‌ಕೇಸ್ ನೊಂದಿಗೆ ಹೊರಹೋಗಿದ್ದು ಹೆಗ್ಗಳಿಕೆಯ ನಡೆ. ಅವರಿಗೆ ಬಂದ ಎಲ್ಲಾ ಫಲಕಗಳನ್ನು, ಅಮೂಲ್ಯ ವಸ್ತುಗಳನ್ನು ರಾಷ್ಟ್ರಪತಿ ಭವನದಲ್ಲಿ ಬಿಟ್ಟು ಹೋದದ್ದು ಆದರ್ಶ ನಡೆ. ಕಲಾಂರಿಂದ ಆ ಹುದ್ದೆಗೆ ವಿಶೇಷ ಗೌರವ ಲಭಿಸಿತು.

### ಸರಳ ಜೀವನದ ಸಂತ

ಕಲಾಂ ಮನೆಯಲ್ಲಿ ಕೊನೆಯವರೆಗೂ ಟಿವಿ ಇರಲಿಲ್ಲ. ಅವರು ಯಾವಾಗಲೂ ಆಲ್ ಇಂಡಿಯಾ ರೇಡಿಯೋ ಕಾರ್ಯಕ್ರಮಗಳನ್ನು ಆಲಿಸುತ್ತಿದ್ದರು. ಸುದ್ದಿಗಳನ್ನು ಅದರ ಮೂಲಕವೇ ಆಲಿಸುತ್ತಿದ್ದರು. ಬೆಳಿಗ್ಗೆ ೬.೩೦ಕ್ಕೆಲ್ಲ ಆರಂಭವಾಗುತ್ತಿದ್ದ ಅವರ ದಿನಚರಿ ತಡರಾತ್ರಿ ೨ ಗಂಟೆವರೆಗೂ ಮುಂದುವರಿಯುತ್ತಿತ್ತು. ಅಧ್ಯಯನಕ್ಕೆ ಹೆಚ್ಚು ಒತ್ತು ನೀಡುತ್ತಿದ್ದ ಅವರು, ಪ್ರತಿ ದಿನ ಇ-ಮೇಲ್‌ಗಳನ್ನು ಖುದ್ದು ತಾವೇ ಪರಿಶೀಲಿಸುತ್ತಿದ್ದರು ಎಂದು. ಕಳೆದ ೨೪ ವರ್ಷಗಳಿಂದ ಕಲಾಂ ಅವರ ಆಪ್ತ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದ ಹ್ಯಾರಿ ಶೆರಿಡನ್ (೫೩) ನೆನಪಿಸಿಕೊಂಡಿದ್ದಾರೆ. ಸರಳಜೀವನ ಉನ್ನತ ಆಲೋಚನೆಗಳಿಗೆ ಸಾಕ್ಷಿಯಾಗಿ ನಡೆದ ಸಂತ ಕಲಾಂ.

ಕಲಾಂ ಅವರ ಸರಳ ವ್ಯಕ್ತಿತ್ವಕ್ಕೆ ಸಾಕ್ಷಿಯಾದ ಘಟನೆಯೊಂದು ೨೦೧೨ರಲ್ಲಿ ಮೈಸೂರು ನಗರದಲ್ಲಿ ನಡೆಯಿತು. ಮೇ ೧೮ರಂದು ಅಬ್ದುಲ್ ಕಲಾಂ ಮೈಸೂರು ನಗರದ ಡಿಎಫ್‌ಆರ್‌ಎಲ್‌ನ ಸುವರ್ಣ ಮಹೋತ್ಸವ ಸಮಾರಂಭದಲ್ಲಿ ಭಾಗವಹಿಸಲು ಆಗಮಿಸಿದ್ದರು. ರಾಷ್ಟ್ರಪತಿಗೆ ವಿಶೇಷ





ಸಿಂಹಾಸನದ ರೀತಿಯ ಕುರ್ಚಿ ಸಿದ್ಧಪಡಿಸಲಾಗಿತ್ತು. ಆದರೆ, ಅವರದರಲ್ಲಿ ಕುಳಿತುಕೊಳ್ಳಲು ಆಸಕ್ತಿ ತೋರದೆ ಸಾಮಾನ್ಯ ಕುರ್ಚಿಯಲ್ಲಿ ಕುಳಿತು ಸರಳತೆ ಮೆರೆದರು.

### ಸೇಫ್ಟೀ ಪಿನ್ ಇದ್ದರೆ ಕೊಡಿ

ಒಡಿಶಾದ ಬಾಲಸೋರಿನಲ್ಲಿ ಕರ್ನಲ್ ಶ್ರೀವಾಸ್ತವ, ಕಲಾಂರ ಸೆಕ್ಯುರಿಟಿ ಇನ್‌ಚಾರ್ಜ್ ಆಗಿದ್ದ. ಹೀಗಾಗಿ ಸದಾಕಾಲ ಅವರ ಜತೆಯಲ್ಲೇ ಇರುತ್ತಿದ್ದ. ಒಮ್ಮೆ ಅವರನ್ನು ಕಾಣಲು ಅಂದಿನ ಸಚಿವ ಶರದ್ ಪವಾರ್ ಬಂದಿದ್ದರು. ಲಗುಬಗೆಯಿಂದ ಅವರನ್ನು ಎದುರುಗೊಳ್ಳಲು ಡಾ. ಕಲಾಂ ಬಂದಿದ್ದರು. ಹವಾಯಿ ಸ್ಲಿಪ್ಪರ್ ತೊಟ್ಟಿದ್ದರು. ಅದೇ ವೇಳೆ ಸ್ಲಿಪ್ಪರ್ ಹರಿದುಹೋಯಿತು. ಆಗ ಕರ್ನಲ್ ಶ್ರೀವಾಸ್ತವ, ಹೊಸ ಚಪ್ಪಲಿ ತರುವಂತೆ ಸೆಂಟ್ರಿಕೆ ಹೇಳಿದ. ಆಗ ಕಲಾಂ, **'ಛೇ, ಇದನ್ನು ಎಸೆಯುವುದು ಬೇಡ. ಒಂದು ಸೇಫ್ಟಿ ಪಿನ್ ಇದ್ದರೆ ಕೊಡಿ. ಇದನ್ನೇ ಸರಿ ಮಾಡೋಣ'** ಎಂದಿದ್ದರಂತೆ.

### ಮಧುರ ಹೃದಯದ ಮಹಂತ

ಸಕಲರಿಗೆ ಲೇಸನೇ ಬಯಸುವ ಭಾವನೆಗಳು ಕಲಾಂ ಅವರ ಹೃದಯದಲ್ಲಿ ಮಡುಗಟ್ಟಿದ್ದವು. unless one be a child, he can not enter into the kingdom of God ಮಕ್ಕಳನ್ನು ಕಂಡರೆ ಕಲಾಂ ಅವರ ಮನ ಸೋಲುತ್ತಿತ್ತು. ದುಃಖಿಗಳನ್ನು ಕಂಡರೆ ಮನ ಮಿಡಿಯುತ್ತಿತ್ತು.

ಒಮ್ಮೆ ನಿಜಾಂ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಕಾಲೇಜಿನ ಪೋಲಿಯೋ ಆದ ಹುಡುಗರು ಓಡಾಡುವಾಗ ಬಹಳ ದುಃಖ ಅನುಭವಿಸಿ ಓಡಾಡುವುದನ್ನು ಕಂಡು ಮನ ಮರುಗಿ ವಿಚಾರಿಸಲಾಗಿ ಅವರ ಕಾಲಿನಲ್ಲಿ ಹಾಕಿದ ಕ್ಯಾಲಿಪರ್ಸ್ ೩ ಕೆಜಿ ಇದ್ದ ಕಾರಣ ಮಕ್ಕಳು ಅಸಾಧ್ಯ ನೋವನ್ನು ಅನುಭವಿಸುತ್ತಿರುವುದು ತಿಳಿಯಿತು. ಕಛೇರಿಗೆ ಹೋದ ಕೂಡಲೇ ಎಲ್ಲಾ ವಿಜ್ಞಾನಿಗಳ ಸಭೆ ಕರೆದು ಕಡಿಮೆ ತೂಕದ ಕ್ಯಾಲಿಪರ್ಸ್ ಮಾಡುವ ಮೂಲಕ ಮಕ್ಕಳು ಅನುಭವಿಸುತ್ತಿರುವ ನೋವನ್ನು ನಿವಾರಿಸಲು ಸಂಕಲ್ಪ ಮಾಡೋಣ ಎಂದರು. ಸತತ ಪ್ರಯತ್ನದ ಕಾರಣ ೩೦೦ ಗ್ರಾಂ ತೂಕದ ಕ್ಯಾಲಿಪರ್ಸ್ ವ್ಯವಸ್ಥೆ ಮಾಡಿ ತೃಪ್ತಿಪಟ್ಟಿದ್ದರು. ಒಮ್ಮೆ ಪತ್ರಕರ್ತ ನಿಮ್ಮ ಅತ್ಯಂತ ಸಂತಸದ ಕ್ಷಣ ಯಾವುದು? ರಾಷ್ಟ್ರಪತಿಯಾದಾಗಲೋ? ಶ್ರೇಷ್ಠ ವಿಜ್ಞಾನಿಯಾದಾಗಲೋ, ಭಾರತರತ್ನ ಪಡೆದಾಗಲೋ ಎಂದಾಗ ಅವರು ಹೇಳಿದ ಮಾತು ನೋಡಿ. **'ಪೋಲಿಯೋ ಆದ ಮಕ್ಕಳು ಕಡಿಮೆ ತೂಕದ ಕ್ಯಾಲಿಪರ್ಸ್ ಹಾಕಿಕೊಂಡು ಸಂತಸದಿಂದ ಓಡಾಡಿದ್ದನ್ನು ನೋಡಿ ನನ್ನ ಕಣ್ಣು ತೇವಗೊಂಡಿದ್ದವು. ಅದಕ್ಕಿಂತ ಸಂತಸದ ಕ್ಷಣ ಮತ್ತೊಂದಿಲ್ಲ'** ಎಂದರು.

ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಇಂಜಿನಿಯರಿಂಗ್ ಕಾಲೇಜಿನ ಸುವರ್ಣಮಹೋತ್ಸವ ಸಮಾರಂಭದಲ್ಲಿ ಮಾರ್ಚ್ ೩೧ರಂದು ಭಾಗವಹಿಸಿದ್ದ ಕಲಾಂ ಅವರ ಬಳಿ ಆಟೋಗ್ರಾಫ್ ಪಡೆಯಲು ವಿದ್ಯಾರ್ಥಿಗಳು ದುಂಬಾಲು ಬಿದ್ದರು. ಆದರೆ ಬಿಡುವಿಲ್ಲದ ಕಾರ್ಯಕ್ರಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಕಲಾಂ 'ಆಟೋಗ್ರಾಫ್, ಫೋಟೋಗ್ರಾಫ್ ಏನಿದ್ದರೂ ವೆಬ್‌ಸೈಟ್‌ನಲ್ಲಿ' ಎಂದು ಉತ್ತರಿಸಿ ವೇದಿಕೆಯಿಂದ ನಿರ್ಗಮಿಸಲು ಅಣಿಯಾದರು.

ವೇದಿಕೆಯ ಮೆಟ್ಟಿಲು ಇಳಿದು ಬರುತ್ತಿದ್ದಂತೆಯೇ 'ಆಟೋಗ್ರಾಫ್ ಪ್ಲೀಸ್...' ಎಂಬ ಮತ್ತದೇ ಕೂಗು ಕಲಾಂ ಅವರ ಕಿವಿಗೆ ಬಿದ್ದಿತು. ಯಾರು ಮತ್ತೆ ಆಟೋಗ್ರಾಫ್‌ಗೆ ಬೇಡಿಕೆ ಮುಂದಿಡುತ್ತಿದ್ದಾರೆಂದು ಕಲಾಂ ತಿರುಗಿ ನೋಡುವಾಗ ಅವರ ಕಣ್ಣಿಗೆ ಬಿದ್ದದ್ದು ಅಂಗವಿಕಲ ಮಕ್ಕಳು. **ತಕ್ಷಣ ಅಂಗವಿಕಲ ಮಕ್ಕಳ ಬಳಿಗೆ ತೆರಳಿದ ಕಲಾಂ ಮಕ್ಕಳನ್ನು ಮಾತನಾಡಿಸಿ ಅವರ ಬದುಕಿನಲ್ಲಿ ಸ್ಫೂರ್ತಿ ತುಂಬಿದ್ದು ಮಾತ್ರವಲ್ಲದೆ ಪ್ರತಿಯೊಂದು ಅಂಗವಿಕಲ ಮಕ್ಕಳಿಗೆ ಆಟೋಗ್ರಾಫ್ ನೀಡಿ ಸ್ಥಳದಿಂದ ನಿರ್ಗಮಿಸಿದರು.** ಇದು ಕಲಾಂ ಅವರ ಹೃದಯವಂತಿಕೆಗೆ ಸಾಕ್ಷಿ.

### ಮಾನವತೆಯ ಧೀಮಂತ

ಕಲಾಂ ಅವರಿಗೆ ದಯೆ, ಅನುಕಂಪೆ ಎರಡು ಕಣ್ಣುಗಳಿದ್ದಂತೆ. ಎಲ್ಲಿಯಾದರೂ ಕಷ್ಟ ಕಾರ್ಪಣ್ಯಗಳು ಕಂಡರೆ ಅವರ ಹೃದಯ ಅನುಕಂಪೆಯಿಂದ ಮಿಡಿಯುತ್ತಿತ್ತು. ೧೯೮೭ರಲ್ಲಿ ಹೈದಾರಾಬಾದಿನ ಡಿಆರ್‌ಡಿಒ ನಲ್ಲಿ ಅರುಣ್ ತಿವಾರಿಯೆನ್ನುವ ಕಿರಿಯವಿಜ್ಞಾನಿ ಹೃದಯತೊಂದರೆಯಿಂದ ಹೈದರಾಬಾದ್ ನಿಜಾಮ್ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಆಸ್ಪತ್ರೆಗೆ ಸೇರಿದ್ದನ್ನು ತಿಳಿದ ತಕ್ಷಣ ಕಲಾಂ ಆಸ್ಪತ್ರೆಗೆ ಹೋದರು. ತಿವಾರಿಯವರು ಸಾವು ಬದುಕಿನ ಮಧ್ಯೆ ಹೋರಾಡುತ್ತಿದ್ದರು. ಅವರ ಹಾಸಿಗೆಯ ಹತ್ತಿರ ಹೋಗಿ Do you need any help from me ಉಸಿರಾಟದ ತೊಂದರೆಯಿಂದ ಬಳಲುತ್ತಿದ್ದರೂ ಕಲಾಂ ಅವರನ್ನು ನೋಡಿದ ತಕ್ಷಣ ತಿವಾರಿ ಮುಖದಲ್ಲಿ ಉತ್ಸಾಹ ತುಂಬುತ್ತದೆ. 'Sir I don't want anything I need only your blessings Sir. If I have a life I wanted to complete any one of your

project' ಎಂದು ಹೇಳುತ್ತಾರೆ. ತಿವಾರಿಯವರ ಈ ಮಾತು ಕಲಾಂ ಅವರಿಗೆ ವಿಶೇಷ ಪರಿಣಾಮ ಬೀರುತ್ತದೆ. ಕಲಾಂ ಹೇಳುವಂತೆ That young man dedication move me to pray all night for his long life. God has answered my prayer. Thivari came back to duty with in one month ಹೀಗೆ ಕಲಾಂ ಅವರು ಸಣ್ಣವ ರಿಂದಲೂ ಕಲಿತು ಅವರಿಗೂ ಪ್ರೇರಕ ಶಕ್ತಿಯಾಗಿದ್ದರು.

***ಕಲಾಂರನ್ನು ಕೆಳಗಿನವರು ಕಂಡಂತೆ***

ಅಧಿಕಾರ ಸ್ವಪ್ರತಿಷ್ಠಾ ಪ್ರಸಾರದ ಸಾಧನವಲ್ಲ ಅದು. ಸೇವೆಯ ಕರ್ಮ ಎಂದು ಅರಿತವರು ವಿರಳ. ಸೇವೆಯನ್ನು ಅಕ್ಕರೆಯಿಂದ ಅಪ್ಪಿಕೊಂಡು ಹೃದಯಪೂರ್ವಕವಾಗಿ ಸೇವೆ ಸಲ್ಲಿಸಿದವರು ಡಾ. ಕಲಾಂ. ಅವರ ಸೇವಾವಧಿಯಲ್ಲಿ ಕೆಳಗಿನ ಅಧಿಕಾರಿಗಳು ತಮ್ಮ ನೆನಪಿನ ಅಂಗಳದ ಅನುಭವಗಳನ್ನು ತೆರೆದಿಟ್ಟಿದ್ದು ಹೀಗೆ.

ದೇಶದ ವಿಜ್ಞಾನ ನಗರಿ ಬೆಂಗಳೂರಿಗೆ ಅವರ ಭೇಟಿ ಹೊಸ, ಹೊಸ ಯೋಜನೆಗಳಿಗೆ, ಯುದ್ಧ ವಿಮಾನಗಳು, ಕ್ಷಿಪಣಿಗಳಿಗೆ ನಾಂದಿ ಹಾಡುತ್ತಿದ್ದವು. ಕೆಲಸ ಮುಗಿದ ಬಳಿಕ ಸರಳ ಊಟ, ಸಂಗೀತ ಕೇಳುವುದು ಮತ್ತು ಹಾಸ್ಯದಿಂದ ಕೂಡಿದ ಹರಟೆ ಎಂದರೆ ನೆಚ್ಚಿನ ಸಂಗತಿ ಆಗಿತ್ತು. ಈ ಸಂಬಂಧ ಡಿಆರ್‌ಡಿಒ ಹಿರಿಯ ವಿಜ್ಞಾನಿ ಡಾ. ಪುರುಷೋತ್ತಮರಾವ್ ನೆನಪುಗಳನ್ನು ಹಂಚಿಕೊಂಡರು. ಪ್ರತಿ ಸಲ ಬೆಂಗಳೂರಿಗೆ ಬಂದಾಗ ಅವರು ಡಿಆರ್‌ಡಿಒ, ಎಚ್‌ಎಎಲ್, ಎನ್‌ಎಎಲ್, ಇಸ್ರೋ ಕೇಂದ್ರಗಳಿಗೆ ಭೇಟಿ ನೀಡುತ್ತಿದ್ದರು. ಹಾಗೇ ಬಂದಾಗ ಕೆಲಸದ ಬಗ್ಗೆಯೇ ಅವರ ಗಮನವಿರುತ್ತಿತ್ತು. ಒಂದು ನಿಮಿಷವೂ ವೇಸ್ಟ್ ಮಾಡುತ್ತಿರಲಿಲ್ಲ. ಯುವ ವಿಜ್ಞಾನಿಗಳು ಮತ್ತು ತಂತ್ರಜ್ಞರಲ್ಲಿ ಲೇಟೆಸ್ಟ್ ಏನು ಮಾಡಿದ್ದೀರಿ, ಹೊಸ ಐಡಿಯಾಗಳು ಏನಿವೆ ಎಂದು ಕೇಳುತ್ತಿದ್ದರು. ಎಲ್‌ಸಿಎ ಸೇರಿದಂತೆ ಹಲವು ಹೊಸ ಯುದ್ಧ ವಿಮಾನಗಳ ಮೊದಲ ಹಾರಾಟದ ವೇಳೆಯಲ್ಲಿ ಖುದ್ದಾಗಿ ಹಾಜರಿರುತ್ತಿದ್ದರು.

ಒಮ್ಮೆ ಡಿಆರ್‌ಡಿಒದ ಹಿರಿಯ ವಿಜ್ಞಾನಿಗಳ ಸಭೆ. ಸಂಜೆ ಆಗಿತ್ತು. ನಿಗದಿತ ಸಮಯಕ್ಕೆ ಬರಲು ಆಗಲಿಲ್ಲ. ಸಂಜೆ ಬಹಳ ಹೊತ್ತು ಆಗಿತ್ತು. ಮೊದಲು ಬಂದವರೇ ಕ್ಷಮೆ ಕೇಳಿದರು. ಮೊದಲು ಊಟ ಮಾಡೋಣವೆ ಅಥವಾ ಮೀಟಿಂಗ್ ಮಾಡೋಣವೇ ಎಂದು ಪ್ರಶ್ನೆ ಮಾಡಿದರು. ಸಭೆಯಲ್ಲಿದ್ದವರು ಊಟದ ನಂತರ ಮೀಟಿಂಗ್ ಮಾಡೋಣ ಎಂದರು. ತುಂಟತನದ ಕಲಾಂ ಅವರು, ಮೊದಲು ಮೀಟಿಂಗ್ ನಂತರ ಊಟ ಎಂದು ಸಭೆಯನ್ನು ಆರಂಭಿಸಿದರು. ಇನ್ನೊಂದು ಸಂದರ್ಭದಲ್ಲಿ ನಾವು ಕೆಲಸ ಮಾಡುತ್ತಿದ್ದ ಟೇಬಲ್ ಬಳಿ ಬಂದರು. ಆಗ ಎದ್ದು ನಿಲ್ಲಲು ಮುಂದಾದೆವು. ಆದರೆ, ಅದಕ್ಕೆ ಅವಕಾಶ ನೀಡದ ಅವರು, ನಮ್ಮನ್ನು ನಮ್ಮ ಕುರ್ಚಿಯಲ್ಲೇ ಕುಳ್ಳಿರಿಸಿ, ನಮ್ಮ ಮುಂದಿನ ಟೇಬಲ್ ಮೇಲೆ ಅವರು ಕುಳಿತು ಯೋಜನೆಗಳ ಬಗ್ಗೆ ಮಾತು ಮುಂದುವರೆಸಿದರು. ತಾವೊಂದು ಸಂಸ್ಥೆಯ ಮುಖ್ಯಸ್ಥ ಮತ್ತು ದೊಡ್ಡ ವಿಜ್ಞಾನಿ ಎಂಬ ಅಹಂ ಅವರಲ್ಲಿ ಇರಲಿಲ್ಲ. ಏರೋಸ್ಪೇಸ್ ಅವರ ನರನಾಡಿಗಳಲ್ಲಿ ಹರಿದಾಡುತ್ತಿತ್ತು.

ಧಾರವಾಡದ ನಿವೃತ್ತ ಬ್ರಿಗೇಡಿಯರ್ ಎಸ್.ಜಿ. ಭಾಗವತ್ ಒಡಿಶಾದ ಬಾಲಸೋರ್‌ನಲ್ಲಿ ದಶಕ ಕಾಲ ಕಲಾಂ ಅವರ ಸಹೋದ್ಯೋಗಿಯಾಗಿದ್ದರು. ಕಲಾಂರೊಂದಿಗೆ ಕಳೆದ ದಿನಗಳನ್ನು ನೆನಪಿಸಿದ್ದು ಹೀಗೆ–

ಕಲಾಂರ ಜತೆಗಿನ ಒಡನಾಟ ಹಲವು ಜೀವನ ಪಾಠಗಳನ್ನು ಕಲಿಸಿದೆ. ಅಂಥ ಕೆಲವು ವಿಷಯಗಳಲ್ಲಿ ಮೆಲುಕು ಹಾಕುತ್ತಿದ್ದೇನೆ.

**ಪಾಸಿಟಿವ್ ಥಿಂಕಿಂಗ್** : ಅದು ಬಹುಶಃ ೧೯೯೧ರ ನವೆಂಬರ್ ತಿಂಗಳಿರಬಹುದು. 'ಪೃಥ್ವಿ' ಉಡಾವಣೆ ವಿಫಲವಾಗಿತ್ತು. ತದನಂತರ ವೈಫಲ್ಯ ವಿಶ್ಲೇಷಣಾ ಮಂಡಳಿಯಿಂದ ವಿಫಲತೆಯ ವಿಶ್ಲೇಷಣೆ ನಡೆಯುತ್ತಿತ್ತು. ಅಂದು ಯೋಜನಾ ನಿರ್ದೇಶಕರಾಗಿದ್ದ ಡಾ. ವಿ.ಕೆ. ಸಾರಸ್ವತರು ಅಧ್ಯಕ್ಷತೆ ವಹಿಸಿದ್ದರು. ಎಂದಿನಂತೆ 'ಕಲಾಂ ಸರ್' ಕೇವಲ ವೀಕ್ಷಕರಾಗಿ ಕುಳಿತಿದ್ದರು. ಎಲ್ಲರಲ್ಲೂ ಹೇಳಲಾರದ ಉದಾಸೀನತೆ ಆವರಿಸಿತ್ತು. ಅದನ್ನು ಕಂಡವರೇ ಕಲಾಂ, 'ಯಾಕೆ ನೀವೆಲ್ಲಾ ಸಪ್ಪಗಿದ್ದೀರಿ. ನಮ್ಮ ಉಡಾವಣೆ ತುಂಬಾ ಯಶಸ್ವಿಯಾಗಿದೆಯಲ್ಲ' ಎಂದರು. ನಾವು ಅಚ್ಚರಿಯಿಂದ ನೋಡಿದೆವು. ಆಗ ಅವರು, 'ನೋಡಿ ನಮ್ಮ ಉಡಾವಣೆಯ ಪೂರ್ವದಲ್ಲಿ ಹಮ್ಮಿಕೊಂಡಿದ್ದ ೧೦ ಮೈಲಿಗಲ್ಲುಗಳನ್ನು ಈ ಬೋರ್ಡ್ ಮೇಲೆ ಬರೆಯೋಣ' ಎನ್ನುತ್ತ ಅವುಗಳನ್ನು ಬರೆಯಿಸಿದರು ಅವುಗಳಲ್ಲಿ ಯಾವ್ಯಾವುದು ಸಾಧ್ಯವಾಗಿದೆ ಎಂದು ಗುರುತು





ಹಾಕುತ್ತ ಹೋದರು. ನೋಡಿದರೆ ೧೦ರಲ್ಲಿ ೭ ಮೈಲಿಗಲ್ಲು ನಾವು ಯಶಸ್ವಿಯಾಗಿ ದಾಟಿರುವುದು ಗೊತ್ತಾಯಿತು. ಆಗ ಕಲಾಂ ಸರ್, 'ನೋಡಿ ನಿಮಗೆ ಶೇ. ೭೦ರಷ್ಟು ಯಶಸ್ಸು ಬಂದಿದೆಯಲ್ಲ. ಮತ್ತೇಕೆ ಬೇಸರ. ಇನ್ನುಳಿದ ೩ ಮೈಲಿಗಲ್ಲುಗಳನ್ನು ಮುಂದಿನ ಉಡಾವಣೆಯಲ್ಲಿ ದಾಟಿ ಬಿಡೋಣ. ಅಂದ ಹಾಗೆ ಮುಂದಿನ ಉಡಾವಣೆ ಯಾವಾಗ ಹಮ್ಮಿಕೊಂಡಿದ್ದೀರಾ?' ಎಂದು ಕೇಳಿದ್ದರು. ಹಾಗೆ ೧೯೯೨ರಲ್ಲಿ ನಾವದನ್ನು ಸಾಧಿಸಿದೆವು ಕೂಡ.

***ಕ್ಷಮೆ ಕೇಳಿದ ಕಲಾಂ***

ದೇಶದ ಉನ್ನತ ಪದವಿಗೇರಿದ ಕಲಾಂ ಭದ್ರತಾ ಸಿಬ್ಬಂದಿಯವರ 'ಡಿ' ಗ್ರೂಪ್ ವ್ಯಕ್ತಿಯ ಕ್ಷಮೆ ಕೇಳಿದರೆಂದರೆ ಮುಂದಿನ ಪೀಳಿಗೆ ನಂಬಲಾರದು. ಅವರ ಮನೋಸ್ಥಿತಿ ತಿಳಿಯುವುದು ಕಷ್ಟಸಾಧ್ಯ. ಅಂತಹ ಒಂದು ಘಟನೆ ೨೭-೦೭-೨೦೧೫ರಂದು ನಡೆಯಿತು. ಅವರು ಕಾರಿನಲ್ಲಿ ಪ್ರಯಾಣಿಸುವಾಗ ೬-೭ ಕಾರುಗಳು ಬೆಂಗಾವಲಿಗಿದ್ದವು. ಅವರ ಕಾರಿನ ಮುಂಭಾಗದಲ್ಲಿ ತೆರೆದ ಜಿಪ್ಸಿ ಒಂದಿತ್ತು. ಅದರಲ್ಲಿ ಮೂವರು ರಕ್ಷಣಾ ಸಿಬ್ಬಂದಿಗಳಿದ್ದರು. ಅವರಲ್ಲಿ ಇಬ್ಬರು ಆ ಕಡೆ, ಈ ಕಡೆ ಕುಳಿತಿದ್ದರು. ಇನ್ನೊಬ್ಬ ತೆಳ್ಳಗಿನ ಯುವಕ ಗನ್ ಹಿಡಿದು ಸನ್ನದ್ಧನಾಗಿ ನಿಂತಿದ್ದ. ಸುಮಾರು ಒಂದು ಗಂಟೆ ಪ್ರಯಾಣದ ಬಳಿಕ ಕಲಾಂ. 'ಆತ ಏಕೆ ನಿಂತಿದ್ದಾನೆ..... ಇದೊಂಥರಾ ಶಿಕ್ಷೆ ಇದ್ದ ಹಾಗೆ. ವೈರ್‌ಲೆಸ್ ಸಂದೇಶದ ಮೂಲಕ ಆತನಿಗೆ ಕುಳಿತುಕೊಳ್ಳಲು ಸಂದೇಶ ರವಾನಿಸಿದರೆ ಆತ ಕುಳಿತುಕೊಳ್ಳುವನೇನೋ..?' ಎಂದು ಹೇಳಿದರು. ಮತ್ತೂ ಒಂದೂವರೆ ತಾಸಿನ ಪ್ರಯಾಣದಲ್ಲಿ ಆತನನ್ನು ಕುಳ್ಳಿರಿಸಲು ಸಾಕಷ್ಟು ಪ್ರಯತ್ನ ನಡೆಸಿದ್ದರು. ಪ್ರಯಾಣ ಮುಗಿದ ಬಳಿಕ ಕಲಾಂ ಆತನನ್ನು ಕರೆಸಿಕೊಂಡು, **'ನಿನಗೆ ಬಹಳ ಸುಸ್ತಾಯಿತೇನೋ... ಬಹಳ ಹೊತ್ತಿನಿಂದ ನಿಂತೇ ಪ್ರಯಾಣಿಸಿದೆ. ನನ್ನಿಂದಾಗಿ ನಿನಗೆ ತೊಂದರೆ ಆಯಿತು. ಕ್ಷಮಿಸಿಬಿಡಪ್ಪಾ...'** ಎಂದರು. ಅದಕ್ಕಾತ **'ನಿಮಗೋಸ್ಕರ ಆರು ಗಂಟೆ ಬೇಕಾದರೂ ನಿಂತೇ ಇರುತ್ತೇನೆ'** ಎಂದಿದ್ದ!

ಮಹಾನ್ ಚೇತನ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಇನ್ನು ನೆನಪು ಮಾತ್ರ. ಹುಟ್ಟಿದ್ದು ತಮಿಳುನಾಡಿನ ರಾಮೇಶ್ವರಂನ ಕಡು ಬಡತನದ ಕುಟುಂಬದಲ್ಲಿ. ಪರಿಶ್ರಮವನ್ನೇ ಉಸಿರಾಗಿಸಿಕೊಂಡು ತಲುಪಿದ್ದು ರಾಷ್ಟ್ರದ ಅತ್ಯುನ್ನತ ಪದವಿಗೆ. ಇದಕ್ಕೆಲ್ಲಾ ಕಾರಣವಾದದ್ದು ಅವರ ಕ್ರಿಯಾಶೀಲತೆ, ಪಾರದರ್ಶಕ ವ್ಯಕ್ತಿತ್ವ ಮತ್ತು ಉದಾತ್ತ ಆಲೋಚನೆ ಎಂದರೆ ಅತಿಶಯೋಕ್ತಿಯಲ್ಲ. ಸಾಧಿಸುವ ಛಲವೊಂದಿದ್ದರೆ ಸಾಧನೆ ಕಷ್ಟದ ಮಾತೇನಲ್ಲ ಎಂಬುದಕ್ಕೆ ಕಲಾಂ ಅವರೇ ಸಾರ್ವಕಾಲಿಕ ನಿದರ್ಶನ. ಬಾಲ್ಯದಲ್ಲಿ ಪೇಪರ್ ಹಂಚುವ ಹುಡುಗನಾಗಿದ್ದ ಕಲಾಂ ಮುಂದೆ ಈ ದೇಶಕಂಡ ಅತ್ಯಂತ ಶ್ರೇಷ್ಠ ಕ್ಷಿಪಣಿ ತಂತ್ರಜ್ಞರೆನಿಸಿಕೊಂಡರು. ಭಾರತ ದೇಶದ ಮಾದರಿ ರಾಷ್ಟ್ರಪತಿ ಎಂದು ಕರೆಸಿಕೊಂಡರು. ಭವ್ಯ ಭಾರತದ ಉಜ್ವಲ ಕನಸು ಕಂಡು ಕೊನೆಯುಸಿರಿರುವರೆಗೂ ಹಗಲಿರುಳೆನ್ನದೆ ಶ್ರಮಿಸಿ ಅಜರಾಮರರಾದರು.

ಕಲಾಂ ಅವರ ನಿಜವಾದ ವ್ಯಕ್ತಿತ ಇಡೀ ದೇಶಕ್ಕೆ ಅನಾವರಣವಾದದ್ದು ಅವರು ೨೦೦೨ರಲ್ಲಿ ಅಭೂತ ಪೂರ್ವ ವಿಜಯದ ಮೂಲಕ ಭಾರತದ ರಾಷ್ಟ್ರಪತಿಯಾದಾಗ. ಅಂದಿನ ಅಟಲ್ ಬಿಹಾರಿ ವಾಜಪೇಯಿ ಸರ್ಕಾರ ತೆಗೆದುಕೊಂಡ ಮಹತ್ವದ ನಿರ್ಧಾರದ ಫಲವಾಗಿ ಭಾರತದ ೧೧ನೇ ರಾಷ್ಟ್ರಪತಿಯಾಗಿ ನೇಮಕಗೊಂಡ ಕಲಾಂ ರಾಷ್ಟ್ರಪತಿ ಭವನಕ್ಕೆ ನಿಜವಾದ ಮೆರುಗು ನೀಡಿದರು. ಸರಳ, ಸಜ್ಜನಿಕೆಯ ವ್ಯಕ್ತಿತ್ವದ ಮೂಲಕವೇ ರಾಷ್ಟ್ರಪತಿ ಹುದ್ದೆಯ ಗೌರವ ಮತ್ತು ಮಹತ್ವವನ್ನು ಹೆಚ್ಚಿಸಿದರು. ಕಲಾಂ ವರ್ತಮಾನದ ಬಗ್ಗೆ ಮಾತ್ರ ತುಡಿದವರಲ್ಲ. ಭಾರತದ ಭವಿಷ್ಯ ಹೇಗಿರಬೇಕು ಎಂಬುದರ ಕುರಿತೂ ಚಡಪಡಿಸಿದರು. ಅದರ ಒಂದು ರೂಪವೇ ಕಲಾಂ ಅವರ 'ವಿಷನ್ ೨೦೨೦' ಮುಂದಿನ ಹತ್ತು ಹದಿನೈದು ವರ್ಷಗಳಲ್ಲಿ ಕೃಷಿಯಿಂದ ವಿಜ್ಞಾನದವರೆಗೆ ಈ ದೇಶದ ಭವಿಷ್ಯ ಹೇಗಿರಬೇಕೆಂಬುದರ ಸ್ಪಷ್ಟ ನೀಲಿ ನಕ್ಷೆಯನ್ನು ದೇಶದ ಜನತೆಯ ಮುಂದಿಟ್ಟರು. ಆಳುವ ಸರ್ಕಾರಗಳನ್ನು ಆ ಕುರಿತು ಪದೇ ಪದೇ ಬಡಿದೆಬ್ಬಿಸುವ ಪ್ರಯತ್ನ ಮಾಡಿದರು. ರಾಷ್ಟ್ರಪತಿ ಸ್ಥಾನದಿಂದ ನಿವೃತ್ತಿಯಾದ ಬಳಿಕ ಕಲಾಂ ಅವರು ತಾವು ಕಂಡ 'ವಿಷನ್ ೨೦೨೦' ಕನಸಿನ ಸಾಕಾರಕ್ಕಾಗಿ ದೇಶದ ಉದ್ದಗಲಕ್ಕೂ ಸಂಚಾರ ಕೈಗೊಂಡು ಉಪನ್ಯಾಸ, ಚರ್ಚೆ, ಸಂವಾದಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡರು. ಭವ್ಯ ಭಾರತ ಕನಸು ಕಂಡಿದ್ದ ಕಲಾಂ ಅವರು ಶಾಲಾ ಮಕ್ಕಳ ಮೇಲೆ ವಿಶೇಷವಾಗಿ ಭರವಸೆ ಇಟ್ಟುಕೊಂಡಿದ್ದರು. ಮಕ್ಕಳೊಂದಿಗೆ ಸಂವಾದ, ವಿಚಾರ ವಿನಿಯಮ ಕಾರ್ಯಕ್ರಮಗಳಲ್ಲಿ ಬಲು ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದರು. ಶಿಲ್ಲಾಂಗ್‌ನಲ್ಲಿ ಏರ್ಪಾಟಾಗಿದ್ದ ಅಂತಹುದೇ ಒಂದು ಕಾರ್ಯಕ್ರಮದಲ್ಲಿ ಉಪನ್ಯಾಸ

ನೀಡುತ್ತಿರುವಾಗಲೇ ಕುಸಿದುಬಿದ್ದ ಕಲಾಂ ಕೊನೆಯುಸಿರೆಳೆದರು. ಅವರ ಜೀವನ ಪ್ರೀತಿ, ದೇಶದ ಬಗೆಗಿನ ಕಾಳಜಿ ನಮಗೆಲ್ಲರಿಗೂ ಆದರ್ಶವಾಗಬೇಕು. ಒಟ್ಟಿನಲ್ಲಿ ಅಮೂಲ್ಯರತ್ನವೊಂದನ್ನು ಕಳೆದುಕೊಂಡು ದೇಶ ಬಡವಾಗಿದೆ ಎಂಬ ಕೊರಗು ಕಾಡುತ್ತಿದೆ. ಅವರ ಕನಸು ನನಸಾಗಿಸುವ ಕಾರ್ಯಾಂಜಲಿ ಭಾರತ ವಾಸಿಗಳೆಲ್ಲರ ಕರ್ತವ್ಯವಾಗಿದೆ.

***ಶರಣರ ಬದುಕಿಗೆ ಮರಣವೆ ಸಾಕ್ಷಿ***

'Man is the architect of his own destiny' ಮಾನವ ತನ್ನ ಭವಿಷ್ಯವನ್ನು ರೂಪಿಸಿಕೊಳ್ಳುವ ವಾಸ್ತುಶಿಲ್ಪಿ ತಾನೆ ಎನ್ನುವುದಕ್ಕೆ ಕಲಾಂ ಅವರ ಮಹಾನ್ ಜೀವನದಿಂದ ಮನವರಿಕೆಯಾಗುತ್ತದೆ. ಹೀಗೆ ಅವರೊಬ್ಬ ಪರಿಪೂರ್ಣ ಶರಣರಾಗಿ ಕಾಣುತ್ತಾರೆ. ಶರಣರ ನಿಜವಾದ ಬದುಕಿಗೆ ಸಾಕ್ಷಿ ಎನ್ನುವುದನ್ನು ಮರಣದಲ್ಲಿ ಸಾಕ್ಷೀಕರಿಸಿದರು. '**ಆಖ್ರೀ ಧರ್ಮ್‌ತಕ್ ಕಾಮ್ ಕರತೇ ರಹೋ**' ಕೊನೆ ಉಸಿರಿರುವರೆಗೆ ಕಾರ್ಯಶೀಲನಾಗಿರು ಎನ್ನುವ ಸಂದೇಶವನ್ನು ಸಾಕಾರಗೊಳಿಸಿ, ವಿದ್ಯಾರ್ಥಿಗಳೊಂದಿಗಿನ ಸಂವಾದದೊಂದಿಗೆ ಕೊನೆಯುಸಿರೆಳೆದರು.

ಅಬ್ದುಲ್ ಕಲಾಂ ಇನ್ನಿಲ್ಲ ಎಂಬ ಕೊರಗು ದೇಶವನ್ನು ಕಾಡುತ್ತಿದೆ. ಮಕ್ಕಳಿಂದ ಹಿಡಿದು ವೃದ್ಧರ ತನಕ ಪ್ರತಿಯೊಬ್ಬರು ಆ ಮಹಾತ್ಮನಿಗೆ ಭಾವಪೂರ್ಣ ಶ್ರದ್ಧಾಂಜಲಿ ಅರ್ಪಿಸಿದ್ದಾರೆ. ಕಾರಣ ಕಲಾಂ ಅವರು ಜೀವನದ ಪ್ರತಿಕ್ಷಣವನ್ನೂ ಭಾರತಕ್ಕೆ ಸಮರ್ಪಿಸಿಕೊಂಡಿದ್ದರು. ಅವರ ಆತ್ಮಚರಿತ್ರೆಯಲ್ಲಿ ಹೇಳುವುದು ಹೀಗೆ My sincere appeal to the several million mass of India to never feel 'Small or helpless'. We are all born with divine fire in us. Our effort should be to give winds to this fire and fill the world with glow of its goodness' ಈ ಮಹಾನ್ ಚೇತನದ ಸಂದೇಶ ಓದುಗರ ನೆನಪಿಗಿರಲಿ. Lives of great men all reminds us, we can make our life sublime (longfellow) ದೊಡ್ಡವರ ಜೀವನವನ್ನು ಅವಲೋಕನ ಮಾಡುವುದರಿಂದ ನಾವೂ ಕೂಡ ಉದಾರರಾಗಬಹುದೆಂಬುದಕ್ಕೆ ದಿ. ಡಾ. ಅಬ್ದುಲ್ ಕಲಾಂ ಅವರ ಮಹೋನ್ನತ ಜೀವನ, ಅವರ ಆದರ್ಶ, ಇಂದಿನ ಮಾನವತೆಗೆ ದಾರಿದೀಪವಾಗಲಿ.



## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಓದುಗರಾಗಿರುವುದು ಸಂತೋಷ. ಇದರಿಂದ '**ಸಿದ್ಧಗಂಗಾ**' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಪತ್ರಿಕೆ ಮುನ್ನಡೆ ಅಸಾಧ್ಯವಾಗಿದೆ. ಪೇಪರ್, ಪ್ರಿಂಟಿಂಗ್, ಪೋಸ್ಟೇಜ್ ಇನ್ನಿತರೆ ಖರ್ಚು ವೆಚ್ಚಗಳು ದುಬಾರಿಯಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಪ್ರಸಾರ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಹಿಂಜರಿತ ದಯವಿಟ್ಟು ಅರ್ಥಮಾಡಿಕೊಳ್ಳಬೇಕೆಂದು ಕೋರುತ್ತೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ವರ್ಷದಿಂದ ೧೫೦೦/- ರೂ. ಎಂದು ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ. ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ. ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿ ರುವವರು ಬಾಕಿ ೫೦೦/- ಸಂದಾಯ ಮಾಡಬೇಕು.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ **ನಗದು /ಚೆಕ್ /ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ನಂಬರ್ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರುತ್ತೇವೆ.

'**ಸಿದ್ಧಗಂಗಾ**' ಮುನ್ನಡೆಗೆ ಬಾಕಿ ಸಂದಾಯ ಮಾಡಿ ಸಹಕರಿಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು, 'ಸಿದ್ಧಗಂಗಾ'** ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





# ಯೋಗಾಚಾರ್ಯ ಸಂತ ಗುರುಬಸವಣ್ಣನವರು

- ಯೋಗೀಶ್ ನಿರ್ವಿಕಲ್ಪ *

**ಆಗಸ್ಟ್ ೧೯ ದಾರ್ಶನಿಕ ಶ್ರೇಷ್ಠರಾದ ಗುರುಬಸವಣ್ಣನವರ ೮೨೦ನೇ ಲಿಂಗೈಕ್ಯ ಸಂಸ್ಮರಣೆಯ ನಿಮಿತ್ತ ಅವರು ಉಪದೇಶಿಸಿದ 'ಇಷ್ಟ ಲಿಂಗಯೋಗದ ಕುರಿತು ಒಂದು ಅವಲೋಕನದ ಲೇಖನ.**

ದಾರ್ಶನಿಕ ಶ್ರೇಷ್ಠರಾದ ಸಂತ ಗುರು ಬಸವಣ್ಣನವರು ಯೋಗ ಸೂತ್ರಗಳನ್ನು ವಿಶ್ವಕ್ಕೆ ಉಪದೇಶಿಸಿದ ಶ್ರೇಷ್ಠ ಯೋಗಾಚಾರ್ಯರಲ್ಲಿ ಒಬ್ಬರಾಗಿದ್ದಾರೆ. ಬದುಕಿನ ಪರಮಶ್ರೇಷ್ಠ ಉದ್ದೇಶವಾದ ಪರಮಾತ್ಮನ ಸಾಕ್ಷಾತ್ಕಾರದ ದಿವ್ಯಾನುಭೂತಿಯಲ್ಲಿ ವಿಹರಿಸಿದ್ದ ಅವರು ಇಚ್ಛಾಮರಣಿ ಎನಿಸಿಕೊಂಡಿದ್ದರು. ಮನದ ಅಂತರ್ಯಾಮಿಯಾದ ಪರಮಾತ್ಮನನ್ನು ಅನುಸಂಧಾನಿಸುವ ಯೋಗ ಸೂತ್ರದ ಒಳಮರ್ಮವನ್ನು ಅತ್ಯಂತ ಸರಳ ಸುಂದರವಾಗಿ 'ಇಷ್ಟಲಿಂಗ ಯೋಗ ಸೂತ್ರ'ದ ವಚನಗಳಲ್ಲಿ ಅವರು ಸಮೀಕರಿಸಿರುವುದನ್ನು ನಾವು ಕಾಣಬಹುದು.

*ಅಷ್ಟದಳ ಕಮಲವ ಸುತ್ತುವ ಜೀವಾತ್ಮನ*
*ಮೆಟ್ಟಿದ ದಳವನರಿಯದೆ*
*ಆನು ಭಕ್ತನೆಂತೆಂಬೆ? ಆನು ಶರಣನೆಂತೆಂಬೆ*
*ಆನು ಲಿಂಗೈಕ್ಯನೆಂತೆಂಬೆ*
*ಎನ್ನ ಮನವು ಸಮಾಧಾನವಾಗದನ್ನಕ್ಕ?*

'ನಮ್ಮ ಅಂತರಂಗ ಹೃದಯ ಕಮಲದ ಅಷ್ಟದಳಗಳಲ್ಲಿಯೇ ಜೀವಾತ್ಮ ಪರಿಭ್ರಮಣಿಗೊಳ್ಳುತ್ತಿದೆ. ಜೀವಾತ್ಮ ತನ್ನ ನಿಜಸ್ವರೂಪದ ನಿಜಸ್ಥಾನದಲ್ಲಿ ನೆಲೆಗೊಂಡಾಗ ಮಾತ್ರ ಜ್ಞಾನಾಮೃತದ ಬೆಳಕನ್ನು ಕಾಣಲು ಸಾಧ್ಯ! ಅಂತಹ ಜ್ಞಾನಾಮೃತ ಬೆಳಕನ್ನು ಕಂಡಾಗ ಮಾತ್ರ ಭಕ್ತನೆನಿಸಿಕೊಳ್ಳಲು ಸಾಧ್ಯ! ಶರಣನೆನಿಸಿಕೊಳ್ಳಲು ಸಾಧ್ಯ ಮತ್ತು ಲಿಂಗೈಕ್ಯನೆನಿಸಿಕೊಳ್ಳಲು ಸಾಧ್ಯ! ಎನ್ನುತ್ತಾರೆ ಗುರು ಬಸವಣ್ಣನವರು. ಗುರು ಬಸವಣ್ಣನವರು ಯೋಗದ ಅತ್ಯುನ್ನತ ವಿಚಾರ ತತ್ವಗಳನ್ನು ಈ ವಚನದಲ್ಲಿ ವಿಶದೀಕರಿಸಿರುವುದನ್ನು ನಾವು ಕಾಣಬಹುದು.

ಇಷ್ಟಲಿಂಗ ಯೋಗ ಅಥವಾ ಯೋಗ ಎಂದರೆ ನಮ್ಮ ಅಂತರಂಗದಲ್ಲಿರುವ ಪರಮಾತ್ಮ ತತ್ವದ ಜ್ಞಾನಬೆಳಕನ್ನು ಅನ್ವೇಷಿಸಲು ಹೊರಟ ಜೀವಾತ್ಮ, ಅಂತಿಮ ಹಂತದಲ್ಲಿ ಪರಮಾತ್ಮ ತತ್ವದ ಸತ್ಯ ಸ್ವರೂಪವೇ ನಾನೆಂಬುದನ್ನು ಅರ್ಥೈಸಿಕೊಳ್ಳುವುದಾಗಿದೆ. ಅದುವೇ ಯೋಗದ ನಿಜಾರ್ಥವಾಗಿದೆ. ಅದುವೇ ಯೋಗದ ದಿವ್ಯ ಉದ್ದೇಶವಾಗಿದೆ. ನಮ್ಮೆಲ್ಲಾ ಕಾರ್ಯ ಚಟುವಟಿಕೆಗಳಿಗೂ ಸಾಕ್ಷಿ ಪ್ರಜ್ಞೆಯಂತಿರುವ ನಮ್ಮ ಅಂತರಾತ್ಮ. ನಮ್ಮ ಅಂತರಾತ್ಮನ ನಿಜಾನಂದ ಕಾಣಲು ನಮ್ಮ ಮನಸ್ಸು ಯೋಗ ಸೂತ್ರದ ಮಾರ್ಗದಲ್ಲಿ ಸಾಗುವುದು ಅತ್ಯಂತ ಅಗತ್ಯ. ಈ ಯೋಗ ಸಾಧನಾ ಮಾರ್ಗವನ್ನು ನಾವು ಇಷ್ಟಲಿಂಗ ಯೋಗ ಸೂತ್ರದಲ್ಲಿ ಕಾಣಬಹುದು. ಹಂತ ಹಂತವಾಗಿ ಇಷ್ಟಲಿಂಗ ಯೋಗದ ಮೂಲಕ ಮನಸ್ಸನ್ನು ಬಾಹ್ಯ ವಿಷಯ ಪ್ರಪಂಚದಿಂದ ಬಿಡಿಸಿ, ಪರಮಾತ್ಮ ತತ್ವದತ್ತ ಕರೆದೊಯ್ಯಬೇಕು. ಯೋಗ ಸಾಧನೆಗೆ ಗುರು ಬಸವಣ್ಣನವರು ಸೂಚಿಸುವ ಪ್ರಧಾನ ಸಂಗತಿಯೇ ಆತ್ಮಶುದ್ಧಿ. ಆತ್ಮಶುದ್ಧಿ ಎಂದರೆ ನಮ್ಮ ಮನಃಶುದ್ಧಿ ಎಂದರ್ಥ. ಮನಃಶುದ್ಧಿ ಎಂದರೆ ನಮ್ಮ ಮನಸ್ಸಿನ ಎಲ್ಲಾ ಆಲೋಚನಾ ತರಂಗಗಳು ನಿರ್ಮಲಗೊಳ್ಳಬೇಕು ಅರ್ಥಾತ್ ಸತ್ವಪೂರ್ಣಗೊಂಡಿರಬೇಕು.

'ಇಷ್ಟಲಿಂಗ ಯೋಗ ಸೂತ್ರದ ನಿರ್ಮಾತೃರಾದ ಗುರು ಬಸವಣ್ಣನವರು ಇಷ್ಟಲಿಂಗ ಯೋಗದಲ್ಲಿ ಮೊದಲಿಗೆ ಅರ್ಚನೆಯ ಸೂತ್ರವನ್ನು ಸೂಚಿಸಿದ್ದಾರೆ. ನಿರಾಕಾರ ಸ್ವರೂಪನಾದ ಪರಮಾತ್ಮನ ಸಾಕಾರ ರೂಪವೇ ಇಷ್ಟಲಿಂಗವಾಗಿದೆ. ಪರಮಾತ್ಮ ತತ್ವದಲ್ಲಿ ಜೀವಾತ್ಮನಿದ್ದಾನೆ ಎಂಬುದನ್ನು ಇಷ್ಟಲಿಂಗ ಸಾಕ್ಷೀಕರಿಸುತ್ತದೆ. ನಮ್ಮ ಕಲ್ಪನೆಗಳಿಗೂ ಅತೀತವಾದ ಪರಮಾತ್ಮ ತತ್ವವನ್ನು ಗೋಲಾಕಾರದ ಇಷ್ಟಲಿಂಗ ರೂಪದಲ್ಲಿ ಸಾಂಕೇತಿಕರಿಸಿರುವುದನ್ನು ನಾವಿಲ್ಲಿ ಕಾಣಬಹುದು. ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವ ಯೋಗಸೂತ್ರವನ್ನು ಸಹ ನಾವು ಇಷ್ಟಲಿಂಗಯೋಗ ಸೂತ್ರದಲ್ಲಿ ಕಾಣಬಹುದಾಗಿದೆ. ಭಕ್ತಿ

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ - ೫೭೭೨೦೨.

ಭಾವದಿಂದ ಇಷ್ಟಲಿಂಗವನ್ನು ಅರ್ಚಿಸುವುದರ ಮೂಲಕ ಬಹಿರ್ಮುಖವಾದ ಮನಸ್ಸನ್ನು ಅಂತರಂಗದೆಡೆಗೆ ಕರೆದೊಯ್ಯಬೇಕು. ಪರಮಾತ್ಮನನ್ನು ದೃಢ ಭಕ್ತಿಯಿಂದ ನಂಬಿ, ಮನದೊಳಗಿನ ಎಲ್ಲಾ ಸುಖ ದುಃಖಗಳನ್ನು ಪರಮಾತ್ಮನೊಟ್ಟಿಗೆ ನಿವೇದಿಸಿಕೊಳ್ಳಬೇಕು. ನಿವೇದನೆಯ ಮೂಲಕ ಮನಸ್ಸನ್ನು ನಿರ್ಮಲಗೊಳಿಸಿಕೊಳ್ಳಬೇಕೆಂಬ ಮಾರ್ಗಸೂಚಿ ಗುರುಬಸವಣ್ಣನವರದು. ನಿವೇದನೆಯ ಸೂತ್ರ ಮಾನಸಿಕ ಅರೋಗ್ಯಕ್ಕೆ ಅತ್ಯಂತ ಸಹಕಾರಿ ಎಂದು ಮನಃಶಾಸ್ತ್ರ ಇಂದು ಒಪ್ಪಿಕೊಂಡಿರುವುದನ್ನು ನಾವಿಲ್ಲಿ ಗಮನಿಸಬೇಕಾದ ಸಂಗತಿ.

ಇಷ್ಟಲಿಂಗ ಯೋಗ ಸೂತ್ರದ ದ್ವಿತೀಯ ಹಂತ ತ್ರಾಟಕ ಯೋಗ. ತ್ರಾಟಕ ಯೋಗದಲ್ಲಿ ಸಾಧಕನು ಅಂತರ್ಮುಖಿಗೊಂಡ ಮನಸ್ಸನ್ನು ಓಂಕಾರ ನಾಮಸ್ಮರಣೆಯ ಮೂಲಕ ಅರೆತೆರೆದ ದೃಷ್ಟಿಯಿಂದ ಇಷ್ಟಲಿಂಗವನ್ನು ನೋಡುವುದಾಗಿದೆ. ಓಂಕಾರ ನಾಮಸ್ಮರಣೆಯ ಮೂಲಕ ಅಂತರಂಗದೊಳಗಿನ ಪ್ರಾಣವಾಯು (ಕುಂಡಲನಿ ಶಕ್ತಿ)ವನ್ನು ಜಾಗೃತಿಸುವುದು ತ್ರಾಟಕ ಯೋಗದ ಮುಖ್ಯ ಉದ್ದೇಶ. ಪ್ರಾಣಾಯಾಮದ ಮೂಲಕ ಚಂಚಲವೃತ್ತಿಯ ಮನಸ್ಸನ್ನು ಮಂತ್ರಮಯಗೊಳಿಸುವ ತಂತ್ರವನ್ನು ಗುರು ಬಸವಣ್ಣನವರು ಈ ಯೋಗದಲ್ಲಿ ಸೂತ್ರೀಕರಿಸಿದ್ದಾರೆ. ಕಣ್ಣಿನ ದೃಷ್ಟಿಯನ್ನು ಇಷ್ಟಲಿಂಗದಲ್ಲಿ ಕೇಂದ್ರೀಕರಿಸಿ, ಅದರ ಜೊತೆ ಮನಸ್ಸೂ ಸಹ ಮಂತ್ರಮಯಗೊಂಡು ಹೃದಯಕಮಲದಲ್ಲಿ ಸ್ವಸ್ಥಿರಗೊಳ್ಳುವುದೇ ಪ್ರಾಣಲಿಂಗಸ್ಥಲದ ಒಂದು ಮಹತ್ವ ಪೂರ್ಣ ಹಂತವಾಗಿದೆ.

'ಲಿಂಗಧ್ಯಾನ ಇಷ್ಟಲಿಂಗ ಯೋಗ ಸೂತ್ರದ ತೃತೀಯ ಹಂತ. ಕಣ್ಣುಗಳನ್ನು ಮುಚ್ಚಿ ಮನಸ್ಸನ್ನು ಹೃದಯಕಮಲದಲ್ಲಿ ಕೇಂದ್ರೀಕರಿಸಿ ಧ್ಯಾನಕ್ಕೆ ಒಳಗಾಗುವುದೇ ಲಿಂಗಧ್ಯಾನ ಯೋಗ ಸಮಾಧಿಯಾಗಿದೆ. 'ನಿರ್ವಿಚಾರ ವೈಶಾರದ್ಯೇಧ್ಯಾತ್ಮ ಪ್ರಸಾದಃ' ಎಂದು ಯೋಗದರ್ಶನದ ಶಾಸ್ತ್ರದಲ್ಲಿ ಒಂದೆಡೆ ಉಲ್ಲೇಖಿಸಿದೆ. ಅಂದರೆ ನಿರ್ವಿಚಾರ ಮನಃಸ್ಥಿತಿ ಎಂದರೆ ಸಮಾಧಿ ಸ್ಥಿತಿ ಅರ್ಥಾತ್ ನಿರ್ವಿಕಲ್ಪ ಸ್ಥಿತಿ. ಯೋಗಸಾಧಕನ ಅಂತರಂಗ ಶುದ್ಧಿಯಾದಾಗ ಆಧ್ಯಾತ್ಮಿಕ ಪ್ರಸನ್ನತೆಯನ್ನು ಪಡೆಯುತ್ತಾನೆ. ಮಾಯಾ ಪ್ರಪಂಚದಿಂದ ಮನಸ್ಸು ಹೊರಬಂದು ಶುದ್ಧಗೊಂಡಾಗ ಮನದೊಳಗಿನ ನಿಜ ಸ್ವರೂಪದ ಜ್ಞಾನ ಉಂಟಾಗುತ್ತದೆ ಎನ್ನುವುದು ಅದರ ಅಂತರಾರ್ಥವಾಗಿದೆ.

ಪಂಚಭೂತ ತತ್ತ್ವಗಳಿಂದ ಹೆಣೆದಿರುವ ಈ ಜಗತ್ತಿಗೂ ಹಾಗೂ ಅದೇ ಐದು ತತ್ತ್ವಗಳಿಂದ ಉಂಟಾಗಿರುವ ನಮ್ಮ ಶರೀರಕ್ಕೂ ಒಂದಕ್ಕೊಂದು ಸಂಬಂಧವಿದೆ. ಪಂಚಭೂತ ತತ್ತ್ವಗಳಿಂದ ಉಂಟಾಗಿರುವ ನಮ್ಮ ಶರೀರ ಹಲವಾರು ವಿಸ್ಮಯಗಳ ಗೂಡು. ಪ್ರಕೃತಿಯಲ್ಲಿ ಯಾವೆಲ್ಲಾ ವಿಶಿಷ್ಟ ಶಕ್ತಿ ಮತ್ತು ರಹಸ್ಯಗಳು ಅಡಗಿದೆಯೋ ಹಾಗೆಯೇ ನಮ್ಮೊಳಗೂ ಅಂತಹ ಶಕ್ತಿಗಳು ಅಡಗಿವೆ. ಪಂಚಭೂತ ಶರೀರದಲ್ಲಿ ಜೀವಾತ್ಮನನ್ನು ಬಂಧಿಸಿ, ಅದರಿಂದ ಯಾವ ರೀತಿ ಬಿಡುಗಡೆಗೊಳ್ಳಬೇಕೆಂಬ ಯೋಗ ಸೂತ್ರವನ್ನೂ ಸಹ ಪರಮಾತ್ಮ ನಮ್ಮೊಳಗೆ ಇಟ್ಟಿದ್ದಾನೆ. ಮಾನವ ಮೆದುಳೊಂದರಲ್ಲಿಯೇ ಒಂದು ಸಾವಿರ ಕೋಟಿಗೂ ಅಧಿಕ ನ್ಯೂರಾನ್ ತಂತುಗಳನ್ನು ರಚಿಸಿ, ಅವುಗಳಿಗೊಂದೊಂದು ಸಂಬಂಧ ಕೂಡಿಸಿರುವ ಸೃಷ್ಟಿಕರ್ತ ಪರಮಾತ್ಮನ ಚಮತ್ಕಾರ ಕಂಡಾಗ ಅಚ್ಚರಿಯಾಗದೇ ಇರದು.

ಭಾರತೀಯ ಆಧ್ಯಾತ್ಮ ಯೋಗ ಶಾಸ್ತ್ರದ ಪ್ರಕಾರ ನಮ್ಮ ಈ ವಿಸ್ಮಯ ಶರೀರದಲ್ಲಿ ಚಕ್ರಗಳೆಂಬ ಆರು ನರ ಕೇಂದ್ರಗಳಿವೆ. ಗುಹ್ಯ ಸ್ಥಾನದಲ್ಲಿ ಮೂಲಾಧಾರ ಚಕ್ರವಿದೆ. ಬೆನ್ನು ಹುರಿಯಿಂದ ಶಿರಸ್ಸಿನವರೆಗೆ ಆರು ಚಕ್ರಗಳು ಕ್ರಮವಾಗಿ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ, ಮತ್ತು ಶಿರಸ್ಸಿನಲ್ಲಿರುವ ಬ್ರಹ್ಮ ರಂಧ್ರದ ಬಳಿ ಸಹಸ್ರಾರು ಚಕ್ರವಿದೆ. ಇಷ್ಟಲಿಂಗ ಧ್ಯಾನ ಯೋಗದ ಅನ್ವಯ ಅಂತರಂಗದ ಹೃದಯಕಮಲದೊಳಗಿನ ಅಷ್ಟದಳಗಳನ್ನೂ ಮೆಟ್ಟಿ ಚಲಿಸುವ ಮನಸ್ಸನ್ನು ಇಲ್ಲದಾಗಿಸಿಕೊಳ್ಳಬೇಕು. ಅಂದರೆ ಉದಾತ್ತೀಕರಿಸಿಕೊಳ್ಳಬೇಕು ಎಂದರ್ಥ. ಅಷ್ಟದಳ ಕಮಲ ಹೃದಯಸ್ಥಾನದಲ್ಲಿದ್ದು ಅಷ್ಟದಳ ಕಮಲ ಮಧ್ಯದ ಕರ್ಣಿಕೆಯಲ್ಲಿ ಪರಮಾತ್ಮ ತತ್ತ್ವದ ಸ್ವಾನುಭಾವ ಆಶ್ರಯ ಪಡೆದಿರುತ್ತದೆ.

ಅಷ್ಟದಳಗಳು ಎಂಟು ದಿಕ್ಕಿನತ್ತ ಮುಖಮಾಡಿ ಮನಸ್ಸನ್ನು ವಿಷಯ ಪ್ರಪಂಚದತ್ತ ಸೆಳೆಯುತ್ತಿರುತ್ತವೆ. ಲಿಂಗಧ್ಯಾನ ಯೋಗದ ಸಾಧಕ ಇಂದ್ರ ದಿಕ್ಕಿನ ಎಸಳಿನಲ್ಲಿ ಗೋಚರಿಸುವ ಭಿನ್ನ ಭಕ್ತಿಯ ಭಾವವನ್ನು ಕೊನೆಗಾಣಿಸಿ, ಅಗ್ನಿ ದಿಕ್ಕಿನ ಎಸಳಿನ ಜಡ ನಿದ್ರೆಯನ್ನು ಜಯಿಸಬೇಕು. ಯಮದಿಕ್ಕಿನ ಎಸಳಿನಲ್ಲಿ ಕಾಣುವ ವ್ಯಸನಾದಿ ವಿಕಾರಗಳಿಂದ ಹೊರಬರಬೇಕು. ನೈರುತ್ಯ ದಿಕ್ಕಿನಲ್ಲಿ ಕಾಣುವ ಪಾಪದ





ದುಷ್ಕೃತ್ಯಗಳನ್ನು ಶುದ್ಧೀಕರಿಸಿಕೊಳ್ಳಬೇಕು. ವರುಣ ಎಸಳಿನಲ್ಲಿ ಪ್ರತಿಬಿಂಬಿಸುವ ಮಂದ ಗಮನವನ್ನು ಪರಿಹರಿಸಿಕೊಂಡು, ವಾಯುವ್ಯ ಎಸಳಿನಲ್ಲಿ ಕಂಡುಬರುವ ದುಷ್ಟಾಚಾರವ ದೂರವಿಡಬೇಕು. ಕುಬೇರ ದಿಕ್ಕಿನ ಎಸಳಿನಲ್ಲಿರುವ ದ್ರವ್ಯಾಪೇಕ್ಷೆಯನ್ನು ಧಿಕ್ಕರಿಸಿ, ಈಶಾನ್ಯ ದಿಕ್ಕಿನ ವನಿತಾದಿ ವಿಷಯ ಪ್ರಪಂಚದಿಂದ ಹೊರಬರಬೇಕು. ಅಷ್ಟದಳಂಗಳ ಹಿಡಿದು ಪ್ರಕೃತಿ ಗುಣಂಗಳನ್ನು ನಷ್ಟ ಮಾಡಿ, ಎಲ್ಲಕ್ಕೂ ಆಧಾರವಾಗಿರುವ ಶತಪತ್ರ ಕಮಲ ಕರ್ಣಿಕ ಮಧ್ಯದಲ್ಲಿರುವ ಲಿಂಗದೇವನನ್ನು ಅಚಲಿತ ಧ್ಯಾನದಲ್ಲಿ ಅನುಭಾವಿಸುವುದೇ ಇಷ್ಟಲಿಂಗ ಯೋಗ ಸಮಾಧಿಯ ಪರಮ ಉದ್ದೇಶ. ಯಾವೆಲ್ಲಾ ಭಾವನೆಗಳು ಯಾವುದರ ಆಶ್ರಯದಿಂದ ವ್ಯುತ್ಪತ್ತಿಗೊಳ್ಳುತ್ತಿದೆಯೋ ಅದರ ಮೂಲಸ್ಥಾನದಲ್ಲಿ ಮನಸ್ಸು ನಿಮಗ್ನ (ಅಮನಸ್ಕ) ವಾದಾಗ ಅಂತರಾತ್ಮನ ಜ್ಞಾನಾಮೃತದ ಬೆಳಕು ಅನಾವರಣಗೊಳ್ಳುತ್ತದೆ.

ಲಿಂಗಾರ್ಚನೆ, ತ್ರಾಟಕ ಯೋಗ ಮತ್ತು ಲಿಂಗ ಧ್ಯಾನಗಳ ಮೂಲಕ ನಮ್ಮೊಳಗಿನ ಪ್ರಾಣಶಕ್ತಿ (ಕುಂಡಲಿನಿ ಶಕ್ತಿಯನ್ನು) ಜಾಗೃತಿಸಿಕೊಂಡು ಪ್ರಾಣಾಯಾಮ ನಿರ್ಗುಣದ ಅಷ್ಟವಿಧಾರ್ಚನೆ ಮಾಡಬೇಕು ಎನ್ನುತ್ತದೆ ಗುರು ಬಸವಣ್ಣನವರ ಇಷ್ಟಲಿಂಗ ಯೋಗ ಸೂತ್ರ. ಚಿತ್ತ ಸ್ವಸ್ಥಿರವಾಗಿ ಭಾವವು ಬಯಲ ಬ್ರಹ್ಮನಲ್ಲಿ ಸಮರಸಗೊಳ್ಳಬೇಕು. ನಾ ನೀನೆಂಬ ದ್ವಂದ್ವ ಭಾವವಳಿದು ಕುಂಡಲಿನಿಯು ಸಹಸ್ರಾರು ಚಕ್ರವನ್ನು ತಲುಪಿ ನೆಲೆ ನಿಲ್ಲಬೇಕು. ಉರಿ ಉಂಡ ಕರ್ಪೂರದಂತೆ ಅವಿರಳ ಸಮರಸಗೊಳ್ಳುವುದೇ ನಿಜೈಕ್ಯ ಲಿಂಗೈಕ್ಯ ಸ್ಥಿತಿಯಾಗಿದೆ ಎನ್ನುತ್ತಾರೆ ಲಿಂಗಾನುಭಾವಿಗಳಾದ ಗುರು ಬಸವಣ್ಣನವರು.

ಪ್ರತಿಯೊಬ್ಬರ ನಿತ್ಯ ಬದುಕಿನ ಕಾಯಕವನ್ನೇ ಒಂದು ಯೋಗವನ್ನಾಗಿ ಪರಿವರ್ತಿಸಿದ್ದು ಗುರು ಬಸವಣ್ಣನವರ ಇಷ್ಟಲಿಂಗ ಯೋಗಸೂತ್ರದ ಮಹತ್ವಪೂರ್ಣ ಸಾಧನ. 'ಭೌತಿಕ ಶರೀರ ಗುರುವಿನ ಆಶ್ರಯದಲ್ಲಿ ಶುದ್ಧವಾಗಬೇಕು, ಮನಸ್ಸು ಲಿಂಗಧ್ಯಾನದಲ್ಲಿ ಶುದ್ಧವಾಗಬೇಕು ಹಾಗೂ ನಮ್ಮೊಳಗಿನ ನಾನೆಂಬ ಅಹಂಪ್ರಜ್ಞೆ ಜಂಗಮಕ್ಕೆ ನಿರ್ಭಾವದಿಂದ ಸಮರ್ಪಣೆಗೊಳ್ಳುವುದರ ಮೂಲಕ ಶುದ್ಧಿಯಾಗಬೇಕು ಎಂಬುವುದು ಗುರು ಬಸವಣ್ಣನವರ ಇಷ್ಟಲಿಂಗ ಯೋಗ ಸೂತ್ರದ ಮುಖ್ಯ ಸಂದೇಶಗಳಾಗಿವೆ. ವ್ಯಕ್ತಿ ಮತ್ತು ಸಮಷ್ಟಿಯ ಸರ್ವಾಂಗೀಣ ಅಭಿವೃದ್ಧಿಯ ಜೊತೆ ಆತ್ಮೋದ್ಧಾರಗಳೆರಡನ್ನೂ ಗುರು ಬಸವಣ್ಣನವರು ತಮ್ಮ ಯೋಗಸೂತ್ರದಲ್ಲಿ ಸಮನ್ವಯಿಸಿರುವುದು ಅವರ ಯೋಗ ಸೂತ್ರದ ಒಂದು ವೈಶಿಷ್ಟ್ಯತೆ ಎನ್ನುವುದರಲ್ಲಿ ಯಾವುದೇ ಅತಿಶಯೋಕ್ತಿ ಇಲ್ಲ.

✪



ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ಕೀರುತಿ ತುಂಬಿ.
ಕೂಡಲ ಸಂಗಮದೇವಾ
ನಿಮ್ಮ ಚರಣಕಮಲದೊಳಗಾನು ತುಂಬಿ.

* * *

ದೇವಸಹಿತ ಭಕ್ತ ಮನೆಗೆ ಬಂದಡೆ
ಕಾಯಕವಾವುದೆಂದು ಬೆಸಗೊಂಡೆನಾದಡೆ
ನಿಮ್ಮಾಣೆ ! ನಿಮ್ಮ ಪುರಾತರಾಣೆ ! ತಲೆದಂಡ ! ತಲೆದಂಡ !
ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವನರಸಿದಡೆ
ನಿಮ್ಮ ರಾಣಿವಾಸದಾಣೆ.

– ಬಸವಣ್ಣ

# ಶಾಕ್ತ ಸಂಪ್ರದಾಯ ಮತ್ತು ಅಲ್ಲಮಪ್ರಭು

– ಪ್ರೊ. ಕೆ.ಜಿ. ನಾಗರಾಜಪ್ಪ *

ವಚನ ಚಳವಳಿ ಒಂದು ಭಕ್ತಿಪಂಥ. ಅದು ಇಷ್ಟಲಿಂಗ ತತ್ತ್ವ ಒಪ್ಪಿತು. ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಳ–ಇಷ್ಟಲಿಂಗತ್ವದ ಮೂಲ ಅಂಶಗಳು. ಲಿಂಗಾಂಗ ಸಾಮರಸ್ಯವೇ ಅದರ ಗುರಿ. ಎಲ್ಲಾ ವರ್ಗಗಳೂ ಇಷ್ಟಲಿಂಗಕ್ಕೆ ಸೇರಿ, ಭಕ್ತಿಪಂಥ ಬೆಳೆಸಿದರು. ಅಲ್ಲಮ ಇಂಥ ವಚನ ಚಳವಳಿಯ ಭಕ್ತಿ ಪಂಥದಲ್ಲಿ ಮೂಡಿ ಬಂದ ಅತ್ಯಂತ ಪ್ರಭಾವಶಾಲಿ ಪರಿಚಯದಿಂದ ಪ್ರತಿಕ್ರಿಯಿಸಿರುವ ಧೀಮಂತ ವ್ಯಕ್ತಿ. ಇಷ್ಟಲಿಂಗ ಚಳವಳಿಯ ಮುಕ್ತವೇ ಅಲ್ಲ ಮನ ಸ್ವಭಾವದ ಮುಖ್ಯ ಲಕ್ಷಣ. ವಚನಕಾರರಿಗಿಂತ ಬೇರೆ ವ್ಯಕ್ತಿತ್ವದವನು ಅಲ್ಲಮ. ಅವನ ವಚನಗಳೇ ಇತರ ವಚನಗಳಿಗಿಂತ ಬೇರೆ ಮತ್ತು ವಿಚಾರಪೂರಿತವಾದವು. ಸ್ಫೋಟಕವಾದವು. ಅವನ ವಚನಗಳು ಕೈದಿಲ್ಲದ ಕಲಿತನದವು. ಅಲ್ಲ ವಿರೋಧ ಬದುಕಿನಲ್ಲಿ ಏಕಾರ್ಥವನ್ನು ಕಂಡು ಕೊಂಡವನು. ಹೀಗಾಗಿ ಭಕ್ತಿ ಪಂಥದಲ್ಲಿ ಸುಗುಣಕ್ಕಿಂತ ನಿರ್ಗುಣಕ್ಕೆ ಒಲಿದವನು. ಆದ್ದರಿಂದ ಅಲ್ಲಮ 'ಲಿಂಗದಲ್ಲಿ ಒದಗಿದ ಲಿಂಗವನರಿಯದೆ ಭಂಗ ಪಟ್ಟರು' ಎಂದು ಹಿರಿಯರನ್ನು ಛೇಡಿಸಿದನು. ಲಿಂಗ ಲೈಂಗಿಕ ಸಂಕೇತವೋ ಅಲ್ಲವೋ ಎಂಬುದರ ಬಗ್ಗೆ ತೀವ್ರವಾದ ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ಲೈಂಗಿಕ ಪ್ರತಿಮೆಗಳು ಮತ್ತು ಸ್ವರೂಪ ಕಾಪಾಲಿಕರು, ಕಾಳಮುಖರು, ಪಾಶುಪಾತರು, ಅಘೋರಿಗಳು ಮುಂತಾದ ಪಂಥೀಯರಲ್ಲಿ ಕಾಣಬಹುದು. ಈ ವಿಷಯವನ್ನು ಕುರಿತ ಬಿ. ಭಟ್ಟಾಚಾರ್ಯರ ಅಭಿಪ್ರಾಯ 'The Phallic in Hinduism is a historical fact, but it is also entirely denounced fact' (Saivisirn and phallic world p.617) ಪರಿಶೀಲನೆಗೆ ಅರ್ಹವಾದುದು. ಅಲ್ಲಮ ಗುಹೇಶ್ವರ ಲಿಂಗ ಗುಪ್ತ ಎಂದಿದ್ದಾನೆ. ಅದು ನಿರಾಳವಾದುದು. ಗುಪ್ತ ಗುಹೇಶ್ವರ ಲಿಂಗ

*ಕಣ್ಣಿಂಗೆ ಕಣ್ಣು, ಕಣ್ಣೋಳು ಕಣ್ಣು, ಕಣ್ಣೇ ನೇತ್ರ, ನೇತ್ರವೇ ಸೂತ್ರ.*
*ಸೂತ್ರವೇ ಲಿಂಗ, ಲಿಂಗವೇ ಗುಹ್ಯ ಗುಹ್ಯಕ್ಕೆ ಗುಹ್ಯ, ಗೋಪ್ಯಕ್ಕೆ ಗೋಪ್ಯ*
*ರಹಸ್ಯಕ್ಕೆ ರಹಸ್ಯ ಈ ನೇತ್ರ ಮಹಿಮೆಯಂ ಗುಹೇಶ್ವರ ಬಲ್ಲನಲ್ಲದೆ*
*ಕಣ್ಣು, ಗೆಟ್ಟಣ್ಣಂಗಳೆತ್ತ ಬಲ್ಲರು ನೋಡೈ*

(ಅ.ವ.ಚಂ.ವ. ೧೨೮೭ ಪು.೨೮೧)

ಈ ರಹಸ್ಯವಾದ ಲಿಂಗಾಂಗ ಸಾಮರಸ್ಯ ಸಾಧನೆ ಗುರು–ಶಿಷ್ಯರ ನಡುವಿನ ಗುಟ್ಟು, ಅನುಭವವನ್ನು ಅನ್ಯರಿಗೆ ಬಿಚ್ಚಿಡದ ಗುಟ್ಟು, ಸಾಧನೆ ಅಷ್ಟು ನಿಗೂಢವಾದುದು. ಅಂದರೆ 'ಗೂಢಾತ್ ಗೂಢತರಂ' – ಆದರೂ ಅದು ಸಹಜ ಭಕ್ತಿ, ಸಹಜ ಸಾಧನೆ, ಸಹಜ ಸಮಾಧಿ. ಲೋಕದಲ್ಲಿದ್ದೂ ಲೋಕಾಂತರದ ಅನುಭಾವ ಹೊಂದುವುದು ಸಹಜ ಪಂಥಗಳ ರಹಸ್ಯ ಸಾಧನೆ. ಅನುಭಾವದಲ್ಲಿ ಕೂಟ ಸಾಧನೆ ಬಹಳ ಮುಖ್ಯ. ಸಹಜ ಪಂಥಗಳೂ ಇದಕ್ಕೆ ಹೊರತಲ್ಲ. ಅಲ್ಲಮ ಸಹಜ ಸಾಧಕ. 'ತಾನಭವನಾದಲ್ಲದೆ ಸಹಜ ಭಕ್ತಿಯ ಮಾಡಲಾಗದು' ಎಂಬುದು ಅಲ್ಲಮನ ಮತ. ಸಹಜ ತಾನು ತಾನಾಗುವ ಒಂದು ಸ್ಥಿತಿ. 'ನೆಲನ ಬಿಟ್ಟು, ಆಕಾಶದಲ್ಲಿ ನಿಂದು ಮುಗಿಲೊಳಗೆ ಮಿಂಚಿದಲ್ಲದೆ, ತಾನಾಗಬಾರದು ಗುಹೇಶ್ವರ ನೆಂಬುದು ಬರಿದೆ ಬಹುದೆ' (ವ. ೪೭೫ ಪು. ೧೦೫) ಅಂದರೆ ಯೋಗದ ಮೂಲಕ, ಸಹಸ್ರಾರು ಮುಟ್ಟಿ ಮಹಾಸುಖವನ್ನು (ಶೂನ್ಯವನ್ನು) ಪಡೆಯುವುದು. ಈ ಸಹಜ ಪಂಥಗಳು ತಾಂತ್ರಿಕ ಪಂಥದವು. ಅವುಗಳಲ್ಲಿ ಕೂಟ ಸಾಧನೆ ಅತ್ಯಂತ ಮುಖ್ಯವಾದುದು. ಶಕ್ತಿಯನ್ನೂ ಸಹಜ ಪಂಥ ಕಡೆಗಾಣಿಸುವಂತಿಲ್ಲ. ಅಲ್ಲಮ ಸಹಜ ಸಾಧನೆಗೆ, ತಾತ್ವಿಕ ಮತ್ತು ಅನುಭಾವದ ವ್ಯಾಖ್ಯಾನ ಮಾಡಿದ್ದಾನೆಯೇ ಇಲ್ಲವೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಬಹಿರಂಗ, ಅಂತರಂಗ ಮತ್ತು ಆತ್ಮಭೇದವನ್ನು ಅರಿತವನೇ ಶರಣ ಎನ್ನುತ್ತಾನೆ ಅಲ್ಲಮ. ಅಂತರಂಗ, ರಣರಂಗ, ಬಹಿರಂಗ ಶೃಂಗಾರ ಎಂದ ಅಲ್ಲಮ ಭಕ್ತಿಯಲ್ಲಿ ಒತ್ತು ಕೊಟ್ಟದ್ದು ನಿರಾಕಾರ ಅಥವಾ ನಿರ್ಗುಣ ಭಕ್ತಿಗೆ, ಅಲ್ಲಮನ ವಚನಗಳ ಅಧ್ಯಯನದಿಂದ ತಂತ್ರಕ್ಕೆ ಅವನು ತಾತ್ವಿಕ ಮತ್ತು ಅನುಭಾವದ ವ್ಯಾಖ್ಯಾನದಲ್ಲಿ, ಅವನ ಅನುಭವವನೂ ಪರಿಶೀಲನಾರ್ಹವಾದುದು. ಈ ಹಿನ್ನೆಲೆಯಲ್ಲಿ ವಚನ ಸಾಹಿತ್ಯವನ್ನೇ ಪ್ರಚ್ಛನ್ನ ಶಾಕ್ತ ಸಾಹಿತ್ಯ ಎಂದು ಹೇಳಿದರೆ ತಪ್ಪಿಲ್ಲ. ಅಲ್ಲಮನ ವಚನಗಳೂ ಪ್ರಚ್ಛನ್ನ ಶಾಕ್ತ ಎಂಬುದಕ್ಕೆ ಸಾಕ್ಷಿ. ಅವನ ವಚನಗಳ ಪಾರಿಭಾಷಿಕ ಪದಗಳು, ತಾತ್ವಿಕ ವಿಚಾರಗಳೂ ಗುರುವಾದ, ದೇಹವಾದ, ಚಕ್ರಗಳು, ನಾಡಿಗಳು, ಕುಂಡಲಿನಿ, ಸಹಸ್ರಾರು ಮತ್ತು ಸಾಧನೆಗಳೇ ಅಲ್ಲಮ ಶಾಕ್ತ ಸಂಪ್ರದಾಯ ದವನು ಎಂಬುದು ಸಾಬೀತಾಗುತ್ತದೆ. ಅಲ್ಲಮ ಸಂಪ್ರದಾಯ ಎತ್ತಿ ಹಿಡಿಯಲು ಪ್ರಭುಲಿಂಗಲೀಲೆ ಮತ್ತು ಶೂನ್ಯ ಸಂಪಾದನೆಗಳಂತಹ ಸೃಜನಶೀಲ ಕೃತಿಗಳು ಹುಟ್ಟಿದರೂ, ಅಲ್ಲಮನ ನಿಜ ಜೀವನ ಬಿಚ್ಚಿಕೊಳ್ಳುವುದು ಸಾಧ್ಯವಾಗಲಿಲ್ಲ. ಅನುಭವ ಮಂಟಪದ ಅಧ್ಯಕ್ಷನೆಂದರೂ, ವೀರಶೈವ ವಿಚಾರದಲ್ಲಿ ಮಾತ್ರ ಸ್ಥಾನ ಪಡೆದವನೇ ಹೊರತು. ವೀರಶೈವರ ಆಚಾರದಲ್ಲಿ ಎಂದೂ ದೈವತ್ವ ಪಡೆದು ಅಧಿಕೃತವಾಗಿ ಮಾನ್ಯತೆಯನ್ನು ಹೊಂದಲಿಲ್ಲ. ಅಲ್ಲಮ ಇದ್ದೂ ಇಲ್ಲದಂತೆ, ವಚನಕಾರರಲ್ಲಿ 'ಆಟಕ್ಕೆ ಉಂಟು, ಲೆಕ್ಕಕ್ಕೆ ಇಲ್ಲ' ಎಂಬ ಗಾದೆಯ ಮಾತಿನಂತೆ ಅವನು ಅಸಡ್ಡೆಯಾಗಿರುವುದು ನುಂಗಲಾರದಂತಹ ಅವನ ಸಿಡಿಲಿನಂತಹ ಕಿಡಿನುಡಿಗಳಿಂದ ಮತ್ತು ಅಲ್ಲಮ ಶೈವ ಪಂಥ ಮತ್ತು ವೀರಶೈವರ ಬಗ್ಗೆ ಎತ್ತಿದ ಮೂಲಭೂತವಾದ ಪ್ರಶ್ನೆಗಳಿಂದ ತಂತ್ರದಲ್ಲಿ ಕುಲಾಚಾರ ಮತ್ತು ಸಮಾಯಾಚಾರ ಎಂದು ಎರಡು ವಿಧ. ಕುಲಾಚಾರ ಬಹಿರಂಗದ್ದು. ಸಮಾಚಾರ ಅಂತರಂಗದ್ದು. ಸಮಯಾಚಾರ...... is own 'heart lotus' without necessarily having to recite or to engage in any worship detail whatsoever' – S.K. Ramachandra Rao ಸಮಯಾಚಾರ ನೇರವಾಗಿ ಗುರುವಿನಿಂದ ಕಲಿಯುವ ಗೋಪ್ಯವಿದ್ಯೆ, ಸಮಯ ಅನುಸರಿಸಿ, ಸಮಯ ಮೀರುವುದನ್ನು ಅಲ್ಲಮನ ವಚನ ಸ್ಪಷ್ಟಪಡಿಸುತ್ತದೆ.

*ಸಮಯ ಬಿಡಬಹುದೆ ಅಯ್ಯಾ! ಅಟ್ಟ ಅಶನವಾದಡೂ*
*ಕಲಿಸುವ ಕೈ. ಉಂಬುದಕ್ಕೆ ಬಾಯಿ ಬೇಕು.*
*ಉಂಬುದಿಲ್ಲ ಎಂದು ಸಂದೇಹ ಹರಿದಲ್ಲಿ*
*ಸಮಯವೊಂದೂ ಇಲ್ಲ ಎನಬೇಕು*
*ಗುಹೇಶ್ವರನೆಂಬನ್ನಕ್ಕ ಬಂಧಮೋಕ್ಷವನರಿಯಬೇಕು.*

ಅ.ವ.ಚಂ.ವ. ೧೨೪೬ ಪು. ೨೭೧

ಆದ್ದರಿಂದಲೇ ಅಲ್ಲಮನ ಮನಸ್ಸು ಸದಾ ತುಡಿಯುವುದು ಅತೀತತ ಕಡೆಗೆ :

*ಕುರುಹುಳ್ಳನ್ನಕ್ಕ ಸಮಯದ ಹಂಗು*
*ಅರಿದಿಹೆನೆಂಬನ್ನಕ್ಕ ಆತ್ಮನ ಹಂಗು*
*ಅಲ್ಲ ಅಹುದೆನ್ನಕ್ಕರ ಎಲ್ಲರ ಹಂಗು*
*ಗುಹೇಶ್ವರನೆಂಬನ್ನಕ್ಕರ ಲಿಂಗದ ಹಂಗು ಬೇಕು...*

ಅ.ವ.ಚಂ.ವ. ೧೨೪೮ ಪು. ೨೭೧

ಅಲ್ಲಮನಿಗೆ ಲಿಂಗ ಸಾಧನೆಯೆ ಸಹಜ ಸಾಧನೆ. ಅದರ ಯಾವ ಪದವಿಯೂ ಅವನಿಗೆ ಅನಗತ್ಯ.

*ಬೇಡುವೆನೆ ಇಂದ್ರಪದವಿಯನಿನ್ನು?*
*ಮೂಡುವ ಸೂರ್ಯನ ಪ್ರಭೆಯಂತೆ*
*ಓಡದಿರು ಓಡದಿರು, ಎನ್ನ ಮುಂದಣ*
*ಮಾಣಿಕ್ಯದ ಹೊಳಹಿನಂತೆ ನೋಡು*
*ಮಾತಾಡು, ಕೃತಕದ ಪದವಿಯ ಬೇಡುವ*
*ಲಿಂಗವೆನ್ನಲ್ಲಿದ್ದುದೆ ಗುಹೇಶ್ವರ*

ಅ.ವ.ಚಂ.ವ. ೮೧೮. ಪು.೧೮೨

ಅಲ್ಲಮನ ಸಾಧನೆ ತಂತ್ರಸಾಧನೆ, ತಂತ್ರಸಾಧನೆಯಲ್ಲಿ ಸಮಯ ಮಾರ್ಗವಾದರೂ, ಅವನು ಅನುಸರಿಸಿದ್ದು ಯಾವ ತಾಂತ್ರಿಕ ಪದ್ಧತಿ ಮತ್ತು ತಾಂತ್ರಿಕ ಮತಕ್ಕೆ, ಅಲ್ಲಮನ ಅಪೂರ್ವ ಕಾಣಿಕೆ ಯಾವುದು ಎಂಬುದು ಖಚಿತವಾಗ ಬೇಕಿದೆ. ಶಾಕ್ತ ಚಾರಿತ್ರಿಕ ಕಾಲಘಟ್ಟಗಳಲ್ಲಿ ಅನೇಕ ಬದಲಾವಣೆ ಹೊಂದಿದೆ. ಆರಂಭದಲ್ಲಿ ಛಲವಂತಿಕೆ, ಔಷಧ, ಧಾರ್ಮಿಕ ವಿಧಿಗಳು, ಸಿದ್ಧಿಗಳು, ಅಭಿಚಾರಗಳು, ಆಧ್ಯಾತ್ಮ ಮತ್ತು ಅನುಭಾವ ತಂತ್ರದ ವಿವಿಧ ಮುಖಗಳು. ತಂತ್ರಗಳನ್ನು ವಿವಿಧ ಮತಗಳು ತಮ್ಮ ತಮ್ಮ ಮತೀಯ ಧರ್ಮ ಪ್ರಚಾರಕ್ಕೆ ಬಳಸಿಕೊಂಡಿವೆ. ಉದಾಹರಣೆ ಶೈವ, ವೈಷ್ಣವ, ಬೌದ್ಧ ಮತ್ತು ಜೈನ ಮತಗಳು. ಅಲ್ಲಮನ ತಂತ್ರಗಳನ್ನು ಶಿವತತ್ವದ ಅನುಭಾವದ ವ್ಯಾಖ್ಯಾನಕ್ಕಾಗಿ ಬಳಸಿರುವುದು ಕಂಡುಬರುತ್ತದೆ. ಅವನು ತಂತ್ರಗಳನ್ನು ಹೇಗೆ ಬಳಸಿಕೊಂಡಿದ್ದಾನೆ ಎಂಬುದನ್ನು ಪರಿಶೀಲಿಸಬೇಕಿದೆ.

ಇಂದು ಶಾಕ್ತ ಮರುಜೀವನ ಪಡೆಯುತ್ತಿರುವಂತೆ, ಅಲ್ಲಮನ ಅಧ್ಯಯನವೂ, ಬುದ್ಧಿಜೀವಿಗಳಲ್ಲಿ ಆಸಕ್ತಿ ಹುಟ್ಟಿಸುತ್ತಿದೆ. ಅಂಥ ಆಸಕ್ತಿಗಳು ಅಲ್ಲಮನ ಅಸಲಿ ಚಿಂತನೆಗಳನ್ನು

* ೭೫, ಅಪೂರ್ವ, ೫ನೇ ಮುಖ್ಯರಸ್ತೆ, ಮಾರುತಿ ಹೆಚ್.ಬಿ.ಸಿ.ಎಸ್. ಬಡಾವಣೆ, ಗುರಪ್ಪನಪಾಳ್ಯ ಬಿ.ಟಿ.ಎಂ. ೧ನೇಹಂತ, ಬೆಂಗಳೂರು.

ಅರಿಯುವುದಕ್ಕಿಂತ, ಅನ್ಯ ಮೂಲದ ಅಮೂರ್ತ ಚಿಂತನೆಗಳ ಹೇರುವಿಕೆಯಿಂದ, ಅಲ್ಲಮನ ಅಧ್ಯಯನ ದಾರಿ ತಪ್ಪುತ್ತಿದೆ ಯೇನೋ ಎಂಬ ಅನುಮಾನ ಬರುತ್ತಿದೆ. ಇದಕ್ಕೆ ಅಲ್ಲಮ ಮತ್ತು ಬೌದ್ಧ ಧರ್ಮದ ತುಲನಾತ್ಮಕ ಅಧ್ಯಯನವೇ ಸಾಕ್ಷಿ. ಇಂಥ ಅಧ್ಯಯನಗಳಲ್ಲಿ ಕಾಲ ಮತ್ತು ಸ್ಥಳ (ಟೈಮ್ ಮತ್ತು ಸ್ಪೇಸ್) ಬದ್ಧತೆಯಲ್ಲಿ, ಕಾಲವನ್ನು ಪರಿಗಣಿಸದೆ, ಕೇವಲ ಸ್ಥಳವನ್ನು ತುಂಬುವುದರಿಂದ, ಅಲ್ಲಮನಿಗೆ ಸೂಕ್ತವಾದ ನ್ಯಾಯ ಒದಗಿಸಿದಂತಾಗುವುದಿಲ್ಲ. ಅದೂ ಅಲ್ಲದೆ ಅಲ್ಲಮನ ಇತಿಮಿತಿಗಳು ಸ್ಪಷ್ಟವಾಗುವುದಿಲ್ಲ. ಅಲ್ಲಮನದು ಸ್ಥಳೀಯ, ಪ್ರಾಂತೀಯ, ರಾಷ್ಟ್ರೀಯ ಸಂಸ್ಕೃತಿಯೋ ಎಂಬುದು ಖಚಿತವಾಗಬೇಕು. ಇದಕ್ಕೆ ಮೊದಲಿಗೆ ಅಲ್ಲಮನ ವಚನಗಳಲ್ಲಿ ಅಸಲಿ ಎಷ್ಟು ನಕಲಿ ಎಷ್ಟು ಎಂಬುದು ಖಚಿತವಾಗಬೇಕಿದೆ. ಅಲ್ಲಮನ ಅತಿ ಮೌಲ್ಯೀಕರಣ ಅಥವಾ ಅಪಮೌಲ್ಯೀಕರಣ ದಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಅಲ್ಲಮನನ್ನು ಅಭಿನವ ಗುಪ್ತನೊಂದಿಗೆ ಹೋಲಿಸುವಾಗಲೂ ಅಷ್ಟೇ ಬಹು ಎಚ್ಚರ ಅಗತ್ಯ. ಅಲ್ಲಮನ ಕಾವ್ಯ ದೃಷ್ಟಿಯನ್ನು ಅರಿಯದೆ, ಅಲ್ಲಮನ ವಚನಗಳ ಅಧ್ಯಯನದಲ್ಲಿ ಕಾವ್ಯದೃಷ್ಟಿಯನ್ನು ಹೇರುವುದು ಅಷ್ಟು ಸಮಂಜಸವಲ್ಲ. ವಚನಕಾರರು ಗಂಭೀರ ಚಿಂತಕರು, ಅವರು ಕಾವ್ಯ ಚಿಂತಕರಲ್ಲ. ಬದುಕಿನ ಜೀವಂತ ಸಮಸ್ಯೆಗಳನ್ನು ಮುಕ್ತವಾಗಿ ಚರ್ಚಿಸಿದವರು, ಬದುಕಿನ ಮೂಲಭೂತ ಪ್ರಶ್ನೆಗಳನ್ನು ಎತ್ತಿದವರು. ಅವರಿಗೆ ವಚನ ವಿನೋದಕ್ಕಲ್ಲ, ಸತ್ಯದ ಅನ್ವೇಷಣೆಗೆ, ವಚನಗಳ ಅಭಿವ್ಯಕ್ತಿಯಲ್ಲಿ ಕಾವ್ಯಾಂಶಗಳು ಕಂಡುಬರಬಹುದು. ಅಂದಮಾತ್ರಕ್ಕೆ ಅವು ಕಾವ್ಯಗಳಲ್ಲ. ಅಲ್ಲಮನನ್ನು ನಮ್ಮ ಸಂಸ್ಕೃತಿಯ ಜಾಡಿ ನಲ್ಲಿಯೇ ಅರಿಯುವ ಪ್ರಯತ್ನ ಸೂಕ್ತವಾದುದು. ಅವನ ಬೆಡಗಿನ ವಚನಗಳನ್ನು ಕಾವ್ಯದೃಷ್ಟಿಯಿಂದ ರೂಪಕಗಳು ಎಂದು ಅರ್ಥೈಸುವುದು ಎಷ್ಟರಮಟ್ಟಿಗೆ ಸಮಂಜಸ ವಾದೀತು. ಚಾರಿತ್ರಿಕ ಘಟ್ಟಗಳಲ್ಲಿ ಬೆಳೆದು ಬಂದಿರುವ ಜೀವನಕ್ರಮದ ಹಿನ್ನೆಲೆಯಲ್ಲಿ, ಅಲ್ಲಮನ ವಸ್ತು ನಿಷ್ಠ ಅಧ್ಯಯನ ಅಗತ್ಯ ವಾದುದು. ಬುದ್ಧ ಮತ್ತು ಅಭಿನವ ಗುಪ್ತರೊಂದಿಗೆ ಅಲ್ಲಮನ ತುಲನಾತ್ಮಕ ಅಧ್ಯಯನ ತಪ್ಪಲ್ಲ. ಆದರೆ ಕಾಲ ಮತ್ತು ದೇಶ ಎರಡನ್ನೂ ಪರಿಗಣಿಸಬೇಕು.

ಪ್ರಗತಿಪರ ಬೌದ್ಧಿಕ ಆಧುನಿಕ ಚಿಂತನೆಗಳ ಹೆಸರಿನಲ್ಲಿ ಪ್ರತಿಗಾಮಿ ಬೀಜ ಬಿತ್ತುವುದು ಒಳ್ಳೆಯದಲ್ಲ. ಅಲ್ಲಮ ಇಂದಿಗೆ ಎಷ್ಟು ಪ್ರಸ್ತುತ ಅಥವಾ ಪ್ರಸ್ತುತವಲ್ಲ ಎಂಬ ಗಟ್ಟಿ ನಿರ್ಧಾರಕ್ಕೆ ಬರುವುದು ಉತ್ತಮ. ಅಲ್ಲಮನೇ ಹೇಳಿರುವಂತೆ, "ನೀರನೀಸು ವವನ ದೇಹ ಬಳಲುವುದಲ್ಲದೆ ನೀರು ಬಳಲುವುದೆ?" ಅಲ್ಲಮನ ಅಧ್ಯಯನ ಕಾರರು ಬಳಲಬಾರದು. ಅಲ್ಲಮನಿಗೇ ಸವಾಲಾಗಿ, 'ನೀರು ಮಲಿನವಾಗುತ್ತದೆ, ದೇಹ ಶುದ್ಧವಾಗುತ್ತದೆ' ಎಂದು ಉತ್ತರಿಸುವಂತಿರಬೇಕು ಅಲ್ಲಮನ ಅಧ್ಯಯನ. ಅಲ್ಲಮನ ಇತಿಮಿತಿಗಳನ್ನು ಗುರುತಿಸಿ, ಅಲ್ಲಮನನ್ನು ಬಳಸಿಸುವುದ ರಿಂದ, ಅಲ್ಲಮನಿಗೆ ಸಾಮಾಜಿಕ ನ್ಯಾಯ ದೊರೆತಂತಾಗುತ್ತದೆ. ಅಧ್ಯಯನ ಕೇವಲ ಬೌದ್ಧಿಕ ಕಸರತ್ತಾದರೆ ಆಗುವ ಲಾಭವಾದರೂ ಏನು? ಅವನೇ ಪ್ರಶ್ನಿಸುವಂತೆ,

*ಬೇಸಾಯವ ಮಾಡಿ ಮನೆಯ ಬೀಜಕ್ಕೆ ಬತ್ತವಿಲ್ಲದಿದ್ದರೆ, ಆ ಬೆವಸಾಯದ ಘೋರವೇತಕಯ್ಯ? ಕ್ರಯ ವಿಕ್ರಯವ ಮಾಡಿ ಮನೆಯ ಸಂಚು ನಡೆಯದನ್ನಕ್ಕ ಆ ಕ್ರಯ ವಿಕ್ರಯದ ಘೋರವೇತಕಯ್ಯ ಒಡೆಯನನೋಲೈಸಿ ತನುವಿಂಗೆ ಅಷ್ಟಭೋಗವ ಪಡೆಯದಿದ್ದರೆ ಆ ಓಲಗದ ಘೋರವೇತಕಯ್ಯ? ಭಕ್ತನಾಗಿ ಭವಂನಾಸ್ತಿ ಯಾಗದಿದ್ದರೆ ಆ ಉಪದೇಶವ ಕೊಟ್ಟ ಗುರು, ಕೊಂಡ ಶಿಷ್ಯ, ಇವರಿಬ್ಬರ ಮನೆಯಲ್ಲಿ ಮಾರಿಹೋಗಲಿ ಗುಹೇಶ್ವರ ಲಿಂಗವತ್ತಲೆ ಹೋಗಲಿ.*

ಅ.ವ.ಚಂ.ವ. ೬೫ ಪು. ೧೬

ಅಲ್ಲಮನ ಅಧ್ಯಯನ ಓದುಗರ ಚಾರಿತ್ರಿಕ ಸ್ಥಿತ್ಯಂತರದ ಪ್ರಜ್ಞೆಯ ಕಣ್ತೆರೆಯಿಸಬೇಕೇ ಹೊರತು, ಬೌದ್ಧಿಕ ಭ್ರಮೆ ಹುಟ್ಟಿಸುವಂತಾಗಬಾರದು.

– ಮುಂದುವರಿಯುತ್ತದೆ.

ಶಿವಶರಣನು ನಿದ್ರೆಗೈದಡೆ ಜಪ ಕಾಣಿರಣ್ಣ!
ಶಿವಶರಣನು ಎದ್ದಿದ್ದರೆ ಶಿವರಾತ್ರಿ ಕಾಣಿರಣ್ಣ!
ಶಿವಶರಣನು ನೋಡಿದಡೆ ಪಾಪಕ್ಷಯ ಕಾಣಿರಣ್ಣ!
ಶಿವಶರಣನು ನಡೆದುದೇ ಪಾವನ ಕಾಣಿರಣ್ಣ!
ಶಿವಶರಣನು ನುಡಿದುದೇ ಶಿವತತ್ತ್ವ ಶಿವಮಂತ್ರ ಕಾಣಿರಣ್ಣ!
ಶಿವಶರಣನ ಮನವೇ ಲಿಂಗ ಕಾಣಿರಣ್ಣ!
ಶಿವಶರಣನ ಕಾಯವೇ ಕೈಲಾಸ ಕಾಣಿರಣ್ಣ!
ಗುಹೇಶ್ವರಾ, ನಿಮ್ಮ ಶರಣನ ಚಾರಿತ್ರವು ವಿಪರೀತವು.

– ಅಲ್ಲಮಪ್ರಭು







# ಮಹತ್ಮರಂ ನೆನೆವುದೇ ಘನಮುಕ್ತಿ

– ಹೆಚ್. ಗಂಗಾಧರನ್ *

ಜ್ಞಾನ ವೈರಾಗ್ಯಗಳ ಗೌರೀಶಂಕರವೇರಿದವರು ಮೈಸೂರಿನ ಅರಮನೆ ಪಂಚಗವಿಮಠದ ಲಿಂ । ಪೂ. ಗೌರೀಶಂಕರಮಹಾಸ್ವಾಮಿಗಳವರು. ಆ ಹೆಸರಿಗೆ ಅನರ್ಥ ವಾಗುವ ಮಹಾಜೀವನ ಅವರದಾಗಿತ್ತು. ಅವರದು ನಡೆ ಚನ್ನ, ನುಡಿ ಚನ್ನ, ಎಲ್ಲಿ ನೋಡಿದಡೆ ಚನ್ನ. ಎನ್ನುವ ಬಸವವಾಣಿಗೆ ಬಾಷ್ಯವೆಂಬಂತೆ ಬದುಕಿದವರು. ಭಕ್ತಿಜ್ಞಾನ ವೈರಾಗ್ಯಗಳು ಮುಪ್ಪುರಿಗೊಂಡಂತೆ ಮೈದೂರಿದ್ದ ತೇಜೋ ಮಯ ವ್ಯಕ್ತಿತ್ವ ಅವರದು. ಅವರು ಕಾಯ ಜೀವದ ಹೊಲಿಗೆ ಕಳಚಿದವರು, ಆದ ಕಾರಣ ಬಂಧಮುಕ್ತರು ಶಾಂತಿಸಿದ್ಧರೂ ಆಗಿದ್ದರು.

ಆ ಮಹಾನ್ ಪರ್ವತದ ಎತ್ತರ ಬಿತ್ತರವನ್ನು ಅರಿತವರು ವಿರಳ. ಅಂತವರಲ್ಲಿ ಶತಾಯುಷಿ ಶ್ರೀ ಶಿವಕುಮಾರಸ್ವಾಮಿಗಳು ಒಬ್ಬರು. ಈ ಪೂಜ್ಯರ ತಪಃಶಕ್ತಿ, ಸಾಧನೆ, ಸಿದ್ಧಿ, ಶಕ್ತ್ಯತಿಶಕ್ತಿಯ ಹಿಂದಿರುವ ಪ್ರೇರಕಶಕ್ತಿ. ಶ್ರೀ ಗೌರಿಶಂಕರಮಹಾಸ್ವಾಮಿ ಗಳವರೂ ಒಬ್ಬರು. ಶಿವಕುಮಾರ ಸ್ವಾಮಿಗಳೇ ಹೀಗಿರುವಾಗ ಇನ್ನು ಗೌರೀಶಂಕರ ಮಹಾಸ್ವಾಮಿಗಳು ಹೇಗಿದ್ದಿರಬಹು ದೆಂದು ಊಹಿಸುವುದು ಸಾಮಾನ್ಯರಿಗೆ ಕಷ್ಟಸಾಧ್ಯ. ಅವರ ಮಹಾ ಜೀವನವನ್ನು ಅರಿಯುವುದು ಅಂಗೈಯಲ್ಲಿ ಸಮುದ್ರವನ್ನು ಅಡಗಿಸುವಂತಹ ಸಾಹಸದಂತೆ. ಅಂತಹ ಮಹತ್ತರಂ ನೆನೆವುದೇ ಘನಮುಕ್ತಿಪದ ಎನ್ನುವ ಮಾತಿನಂತೆ ಓದುಗರ ಮಾಹಿತಿಗಾಗಿ ಮೈಸೂರಿನ ಎಚ್. ಗಂಗಾಧರನ್ ಸಂಕ್ಷಿಪ್ತವಾಗಿ ಬರೆದಿರುವ "ಗವಿಮಠದ ಗೌರೀಶಂಕರ ಸ್ವಾಮಿಗಳು" ಎಂಬ ಪುಸ್ತಕದ ಯಥಾ ವಿಚಾರಗಳನ್ನು ಪ್ರಕಟಿಸಲು ಸಿದ್ಧಗಂಗಾ ಹರ್ಷಿಸುತ್ತದೆ. ಆ ತಪೋಧನರ ಚರಿತ್ರೆಯನ್ನು ಓದುಗರು ಅರಿತು ಉದಾರಿಗಳಾದರೆ ಅದಕ್ಕಿಂತ ಮಿಗಿಲಾದುದು ಮತ್ತೊಂದಿಲ್ಲ.

*ಹಿನ್ನೆಲೆ*

*ಬಸವಪುರಾತನರು ಚರಿಸಿ ತೋರಿದ ಷಟ್‌ಸ್ಥಲ ಮಾರ್ಗದೊಳ್ ಪ್ರವರ್ತಿಸುತಮನೂನ ಭಕ್ತಿರತಿಯಿಂ ತನುವಿತ್ತಮನಂಗಳಂ ಸಮರ್ಪಿಸಿ ಗುರುಲಿಂಗಜಂಗಮಕೆ ವಂಚನೆಯಿಲ್ಲದೆ ಮಾಡಿಕೂಡಿ ರಾಜಿಸುವ ಮಹಾತ್ಮರಂ ನೆನವುದೇ ಘನಮುಕ್ತಿಪದಂ ಶಿವಾಧವಾ ॥*

ಘನವಿದ್ವಾಂಸರೂ, ಮಹಾಜ್ಞಾನಿಗಳೂ, ಕವೀಶ್ವರರೂ, ಶಿವಯೋಗಲೀಲಾ ವಿನೋದಚಿತ್ತರೂ, ಪರಮ ಕಾಯಕ ಸದ್ಭಾವಿಗಳೂ ಎನಿಸಿದ ಮಹಾಪುರುಷರು ನಾಡಿಗೆ ಭೂಷಣರು. ರಾಷ್ಟ್ರಕ್ಕೆ ಮಹಾಭೂಷಣರು. ಲೋಕದಲ್ಲಿ ಇಂಥವರು ಅನೇಕ ದಿನಗಳಿಗೊಮ್ಮೆ ಕಾಣಿಸಿಕೊಳ್ಳುತ್ತಾರೆ. ತಮ್ಮ ಜೀವನಮೌಲ್ಯಗಳನ್ನು, ಪ್ರತಿಭಾ ಪ್ರಕಾಶವನ್ನು, ದರ್ಶನ ಜ್ಞಾನಾನುಭವಗಳನ್ನು, ತೇಜೋರೂಪವಾಗಿ ಉಳಿಸಿ ಕಣ್ಮರೆಯಾಗುತ್ತಾರೆ. ಇಂಥ ವಿಭೂತಿ ಪುರುಷರಲ್ಲಿ ಮೈಸೂರಿನ ಅರಮನೆ ಪಂಚಗವಿ ಮಠಾಧ್ಯಕ್ಷರಾಗಿದ್ದ ಶ್ರೀ ನಿ.ಪ್ರ. ಗೌರೀಶಂಕರಸ್ವಾಮಿಗಳೊಬ್ಬರು.

ಮೈಸೂರು ಜಿಲ್ಲೆ ಮತ್ತು ಅದರ ಪರಿಸರ ಪ್ರಾಂತ ಒಂದು ರೀತಿಯಲ್ಲಿ ವೀರಶೈವ ಪ್ರಪಂಚಕ್ಕೆ ಅನೇಕ ವಿಭೂತಿ ಪುರುಷರ, ಶಿವಕವಿಗಳ, ಶಿವಯೋಗಲೀಲಾ ವಿನೋದ ಚಿತ್ತರ, ದಾಸೋಹ ಸದ್ಭಾವಿಗಳ ಅಮೂಲ್ಯ ಕಾಣಿಕೆಯನ್ನಿತ್ತ ಪುಣ್ಯಭೂಮಿಯೆಂದರೆ ಅತಿಶಯೋಕ್ತಿಯೇನೂ ಅನ್ನಿಸದು. ಕಲ್ಯಾಣಕ್ರಾಂತಿಯ ನಂತರ ಶೂನ್ಯಪೀಠದ ಪರಂಪರೆ ಪುನಃ ತಲೆಯೆತ್ತಿ ನಿಲ್ಲುವುದಕ್ಕೆ ಕಾರಣವಾದ ಹರದನಹಳ್ಳಿಯಿರುವುದು ಚಾಮರಾಜ ನಗರದ ಸಮೀಪದಲ್ಲಿಯೆ. ಷಡಕ್ಷರ ಮಹಾಕವಿಯ ಆಡುಂಬೊಲವೆನಿಸಿದ ಎಳಂದೂರು, ನಿಜಗುಣಶಿವಯೋಗಿಗಳವರು ಸಿದ್ಧಿಯನ್ನು ಪಡೆದ ಚಿಲಕವಾಡಿಬೆಟ್ಟ (ಶಂಭುಲಿಂಗನ ಬೆಟ್ಟ) ವಿರುವುದು ಮೈಸೂರಿನ ಸಮೀಪದಲ್ಲಿಯೇ. ತೋಂಟಾದಾರ್ಯರ ಶಿಷ್ಯರೆನಿಸಿ ಪ್ರಸಿದ್ಧ ವಚನಕಾರರಾಗಿ ಹೋದ ಘನಲಿಂಗ ದೇವಸುತ್ತೂರು ವೀರಸಿಂಹಾಸನಪೀಠವಿರುವುದು ಇದೇ ಜಿಲ್ಲೆಯಲ್ಲಿಯೆ. ಬಹುದೊಡ್ಡ ಶೈವಕ್ಷೇತ್ರವಾದ ನಂಜನಗೂಡು ಇರುವುದು ಇಲ್ಲಿಯೇ. ಮಲೆಯ ಮಹದೇಶ್ವರರೆಂಬ ದಿವ್ಯವಿಭೂತಿ ಪುರುಷರು ಮೆರೆದ ಮಹದೇಶ್ವರಬೆಟ್ಟ

* ಹಿರಿಯ ನ್ಯಾಯವಾದಿಗಳು, ಮೈಸೂರು.

ಮೈಸೂರು ಜಿಲ್ಲೆಯ ಪಕ್ಕದಲ್ಲಿಯೇ ಇದೆ. ಇತ್ತೀಚೆಗೆ ಆಗಿಹೋದ ದಾಸೋಹ ಸದ್ಭಾವಿ ದೇವನೂರು ಗುರುಮಲ್ಲೇಶ್ವರರು ಮತ್ತು ಅವರ ಶಿಷ್ಯರಾದ ತ್ರಿವಿಧ ದಾಸೋಹಿ ಭಿಕ್ಷದ ಸ್ವಾಮಿಗಳು, ಕೆಂಗಹಳ್ಳಿ ಮಲ್ಲೇಶ್ವರರು, ಬೆಟ್ಟದಪುರದ ಚಿಕ್ಕವೀರ ದೇಶಿಕೇಂದ್ರ ಶಿವಯೋಗಿಗಳು, ಕಂಬಳೀಶ್ವರರು ಮುಂತಾದ ವಿಭೂತಿ ಪುರುಷರು ಈ ಮೈಸೂರಿನಲ್ಲಿ ಆಗಿಹೋಗಿದ್ದಾರೆ.

ಕ್ರಿ.ಶ.ಸು. ೧೩೦೦–೧೩೫೦ ಹೊತ್ತಿನಲ್ಲಿ ಹರದನಹಳ್ಳಿಯ ಶೂನ್ಯಪೀಠದ ಪರಂಪರೆಯಲ್ಲಿ ಬಂದ ಗೋಸಲ ಸಿದ್ಧೇಶ್ವರರ ಧಾರ್ಮಿಕ, ಸಾಮಾಜಿಕ ಕ್ರಾಂತಿ ಈ ಭಾಗದಲ್ಲಿ ಗಣನೀಯವಾದದ್ದು. ಅವರ ನಂತರ ಬಂದ ದಿವ್ಯ ಲಿಂಗೇಶ್ವರರು ಶಂಕರ ಪ್ರಭುಗಳು, ಗುಬ್ಬಿಯಲ್ಲಿ ಲಿಂಗೈಕ್ಯರಾದ ಚನ್ನಬಸವಪ್ರಭುಗಳು, ತೋಂಟದ ಸಿದ್ಧಲಿಂಗೇಶ್ವರರು, ಹರದನಹಳ್ಳಿ ಶೂನ್ಯಪೀಠ ಪರಂಪರೆಯ ಉಜ್ವಲ ಪ್ರಕಾಶವನ್ನು ಸುತ್ತೆತ್ತಲೂ ಬೀರಿದುದು ವೀರಶೈವ ಧಾರ್ಮಿಕ ಇತಿಹಾಸದಲ್ಲಿ ಮಹತ್ತರವಾದುದು. ಇವರ ಕ್ರಾಂತಿಯ ಬಹುಪಾಲು ಯಶಸ್ಸು ಮೈಸೂರು ಜಿಲ್ಲೆಗೇ ಸಲ್ಲಬೇಕಾದುದು. ಹರದನಹಳ್ಳಿಯ ಶೂನ್ಯಪೀಠದ ಶಂಕರ ಪ್ರಭುಗಳೇ ವಿಜಯನಗರದಲ್ಲಿ ನೂರೊಂದು ವಿರಕ್ತರ ಸಂಪ್ರದಾಯ ಬೆಳೆದು ಬರಲು, ಮತ್ತು ಪ್ರೌಢದೇವರಾಯ (ಕ್ರಿ.ಶ.೧೪೨೯–೪೬) ನಿಗೆ ವೀರಶೈವೋಪದೇಶ ಮಾಡಲು ಕಾರಣಕರ್ತರೆಂಬ ಅಂಶವನ್ನು ನಿರಂಜನವಂಶ ರತ್ನಾಕರ ಗ್ರಂಥ ಸಾರುತ್ತದೆ. ಇವರ ಶಿಷ್ಯರ ಶಿಷ್ಯರಾದ ತೋಂಟದ ಸಿದ್ಧಲಿಂಗೇಶ್ವರರು ಸಮಗ್ರ ಕರ್ನಾಟಕ, ಆಂಧ್ರ, ತಮಿಳು ನಾಡು, ಕೇರಳ, ಮಹಾರಾಷ್ಟ್ರಗಳಲ್ಲಿ ಸಂಚರಿಸಿ ವೀರಶೈವ ಧರ್ಮವನ್ನು ಪುನರುದ್ಧಾರ ಮಾಡಿದ ವಿಷಯವಂತೂ ವೀರಶೈವ ಧಾರ್ಮಿಕ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ಅಂಶ. ಈ ಕಾರಣಕ್ಕಾಗಿಯೇ ಇವರನ್ನು ದ್ವಿತೀಯ ಪ್ರಭುದೇವರೆಂದು ಕರೆಯಲಾಗಿದೆ. ಇವರ ಕ್ರಾಂತಿಯ ಕಾರಣವಾಗಿ ಈ ಭಾಗದಲ್ಲಿ ಸಾವಿರಾರು ಮಠ ಮಾನ್ಯಗಳು ಅಲ್ಲಿ ಅನೇಕ ಶಿವಯೋಗೀಶ್ವರರೂ, ಶಿವಕವಿಗಳು ಹುಲುಸಾಗಿ ಬೆಳೆದುಬರಲು ಕಾರಣವಾಯಿತು.

ಇಂಥ ವೀರಶೈವ ಸಂಸ್ಕೃತಿ, ಸಂಸ್ಕಾರ ಭೂಯಿಷ್ಠವೂ, ಇತಿಹಾಸ ಪ್ರಸಿದ್ಧವೂ ಆದ ಮೈಸೂರು ಜಿಲ್ಲೆಯ ಪುಣ್ಯಭೂಮಿ ಇಪ್ಪತ್ತನೆಯ ಶತಮಾನದ ಮೊದಲ ದಶಕದಲ್ಲಿ ಇನ್ನೊಂದು ಮಹಾಚೇತನಕ್ಕೆ ಜನ್ಮವಿತ್ತುದುದು ಅತಿಶಯೋಕ್ತಿಯಲ್ಲ. ನೆಲದ ಗುಣ ವ್ಯಕ್ತಿಯನ್ನು ರೂಪಿಸುತ್ತದೆ. ವ್ಯಕ್ತಿ ಶಕ್ತಿಯಿಂದಲೂ ನೆಲ ಅವಿಮುಕ್ತ ಕ್ಷೇತ್ರವಾಗುವುದೂ ಉಂಟು. ಎರಡು ಸರಿ !

***ಜನನ–ಬಾಲ್ಯ***

ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿದ ಕಪಿಲಾ ನದಿ ನಂಜನಗೂಡಿನ ಪಕ್ಕದಲ್ಲಿ ಹರಿದು ಮುಂದೆ ಸಾಗಿ ಕಾವೇರಿಗೆ ಸಂಗಮವಾಗುವ ಸ್ಥಳ. ಪುರಾಣಪ್ರಸಿದ್ಧವಾದ 'ತಿರುಮಕೂಡಲು' ಎಂದು ಪ್ರಖ್ಯಾತವಾಗಿದೆ. ಈ ಕಪಿಲಾ–ಕಾವೇರಿ ಸಂಗಮ ಥಟ್ಟನೆ ಜನಮನವನ್ನೆಲ್ಲಾ ಆಕರ್ಷಿಸಿ ಬಿಡುವ ಪ್ರಕೃತಿ ಸೌಂದರ್ಯರಾಶಿ. ಶಿವಸನ್ನಿಧಿಯೇ ಭೂಮಿಗೆ ತಂದಿದೆಯೇ ಎನ್ನುವ ಅಟ್ಟಹಾಸದಿಂದ ಕೂಡಿ ಮನ ಮೈಮರೆಸುವ 'ಸತ್ಯಂ–ಶಿವಂ–ಸುಂದರಂ' ಎನಿಸುವಂತಹ ಸ್ಥಾನವಿಶೇಷ. ಈ ಸಂಗಮಸ್ಥಳದ ಸಮೀಪದಲ್ಲೇ 'ನರಸೀಪುರ' ಇದೆ. ಅದು ಕೇವಲ ನರಸೀಪುರವಲ್ಲ. ತಿರುಮಕೂಡಲು ನರಸೀಪುರ. ಹೆಸರು ಉದ್ದವಾಯಿತೆಂದು ಇತ್ತೀಚೆಗೆ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಟಿ. ನರಸೀಪುರವಾಯಿತು. ಸಂಗಮಕ್ಕೆ ಅನತಿ ದೂರದಲ್ಲಿಯೇ ಟಿ.ನರಸೀಪುರ ತಾಲ್ಲೂಕಿಗೆ ಸೇರಿದ ಒಂದು ಕಿರುವಳ್ಳಿ 'ಉಕ್ಕಲಗೆರೆ' ಮೈಸೂರು ಪ್ರಾಂತದಲ್ಲಿ ಬಹುದಿನಗಳಿಂದ ಹರಿದುಬಂದ ಸಂಸ್ಕೃತಿ–ಸಂಸ್ಕಾರಗಳು ಬೊಬ್ಬುಳಿಗೂಡಿ ೨೦ನೆಯ ಶತಮಾನದ ಮೊದಲ ದಶಕದಲ್ಲಿ ಮೈವೆತ್ತಂತೆ ವೀರಶೈವ ಸಂಸ್ಕೃತಿಯ ಸಾಕಾರ ಮೂರ್ತಿಗಳೊಬ್ಬರು ಉದ್ಭವಿಸಿದರು. ಅವರೇ ಮೈಸೂರು ಅರಮನೆ ಪಂಚಗವಿಮಠಾಧ್ಯಕ್ಷ. ವಿದ್ವಾಂಸ, ದೃಷ್ಟಾರ, ಪ್ರಭಾವಿ ವಿರಕ್ತ ಲಿಂಗೈಕ್ಯ ಗೌರೀಶಂಕರ ಮಹಾಸ್ವಾಮಿಗಳು.

*– ಮುಂದುವರೆಯುತ್ತದೆ.*

**ಶ್ರೀವಾಣಿ**

ಮಾನವ ಜನ್ಮವನ್ನು ಸಾರ್ಥಕಗೊಳಿಸಲು ಸಾಧಕವಾದದು ಧರ್ಮ. ಈ ಬಗೆಯ ಧರ್ಮದ ಆಚರಣೆ ದಿನ ನಿತ್ಯದ ಜೀವನ ಕ್ರಮವಾಗಬೇಕು. ಧರ್ಮದಿಂದ ಹಣವನ್ನು ಗಳಿಸಬೇಕು. ಧರ್ಮಕ್ಕೆ ವಿರುದವಾದ ಗಳಿಕೆ ಅನರ್ಥವಾಗುತ್ತದೆ. ಧರ್ಮ, ಅರ್ಥ ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯವಾಗಬೇಕು.





## ಹಿರೋಶಿಮಾ ನರಮೇಧಕ್ಕೆ ೭೦ ವರ್ಷ

ನಾಗರೀಕತೆಯ ಕಪ್ಪು ಚುಕ್ಕೆ ಹಿರೋಷಿಮಾ, ನಾಗಸಕಿ ಪಟ್ಟಣಗಳ ಮೇಲೆ ಅಮೆರಿಕಾ ನಡೆಸಿದ ಪರಮಾಣು ಬಾಂಬ್ ಸ್ಫೋಟ. ೧೯೪೫ರ ಆಗಸ್ಟ್ ೬ ಇತಿಹಾಸದಲ್ಲಿ ಕರಾಳ ದಿನ ಎಂದೇ ಬಿಂಬಿತವಾಗಿದ್ದು, ಬಾಂಬ್ ಸ್ಫೋಟಗೊಂಡು ಇಂದಿಗೆ ೭೦ ವರ್ಷಗಳು.

ಸುಮಾರು ೨ ಲಕ್ಷಕ್ಕೂ ಹೆಚ್ಚು ಜನರು ಪರಮಾಣು ವಿಕಿರಣಕ್ಕೆ ಸಿಲುಕಿ ಬೆಂದು ಹೋದ ದಿನ. ಬಹಳ ಜನರ ಬದುಕು ಬಹಳ ಕಾಲ ಬದುಕಿಯೂ ಸತ್ತಂತಿದ್ದರು. ಆ ನರಮೇಧದ ಹಿಂದಿನ ನೆನಪು, ವೇದನೆ ನೆನೆದು ಕಣ್ಣೀರು ಹಾಕಿದ್ದರು. ಅಂಗಾಂಗಗಳನ್ನು ಕಳೆದುಕೊಂಡ ಸಾವಿರಾರು ಮಂದಿ ಬದುಕಿದ್ದ ಒಂದೇ ಕಾರಣಕ್ಕೆ ದಿನದೂಡಿದ್ದರು. ಕರಾಳ ನೆನಪುಗಳ ಅವರನ್ನು ಬೆಂಬಿಡದೆ ಕಾಡುತ್ತಿದ್ದವು. ಶಾಶ್ವತವಾಗಿ ಅಂಗಹೀನರಾದವರು ಎಷ್ಟೋ ಮಂದಿ. ತಾಯಿ ಗರ್ಭದಲ್ಲಿ ಕಮರಿ ಹೋದ ಜೀವಗಳಿಗೆ ಲೆಕ್ಕವಿಲ್ಲ.

ಅಂದು ಆಗಸ್ಟ್ ೬, ೧೯೪೫. ಬೆಳಗಿನ ೮–೧೫ರ ಹೊತ್ತು ಶುಭ್ರ ಆಕಾಶ. ಜನರು ತಮ್ಮ ದೈನಂದಿನ ಚಟುವಟಿಕೆಯಲ್ಲಿ ತೊಡಗಿದ್ದರು. ಆದರೆ ಇತ್ತ ಜಗತ್ತು ಕಂಡು ಕೇಳರಿಯದ ಹೀನಾಯ ಕೃತ್ಯಕ್ಕೆ ಅಮೆರಿಕಾ ಮುಂದಾಗಿತ್ತು. ಬಿ–೨೯ ಬಾಂಬರ್ ಎನೋಲಾ ಗೇ ಜಪಾನಿನ ನೀಲಾಕಾಶ ದಲ್ಲಿ ತೇಲಿ ಬಂತು. ಹೀರೋಶಿಮಾ ಪಟ್ಟಣದ ಸುಮಾರು ೫೮೦ ಮೀಟರ್ ಎತ್ತರದಲ್ಲಿ ೩ ಮೀಟರ್ ಉದ್ದ, ೪ ಟನ್ ಬಾರದ 'ಲಿಟಲ್ ಬಾಯ್' ಹೆಸರಿನ ಯುರೇನಿಯಂಯುಕ್ತ ಪರಮಾಣು ಬಾಂಬ್ ಸ್ಫೋಟಿಸಿ ಕಣ್ಮರೆಯಾಯಿತು. ಪರಿಣಾಮ ೧೫ ಸಾವಿರ ಟನ್‌ನಷ್ಟು ಅಗಾಧ ಶಕ್ತಿ ಬಿಡುಗಡೆಯಾಯಿತು. ಸ್ಫೋಟದ ಸಮಯದಲ್ಲಿ ಉಂಟಾದ ಬೆಳಕು ಪುಟ್ಟ ಸೂರ್ಯನನ್ನು ಹೋಲುವಂತಿತ್ತು. ಬೆಂಕಿಯುಂಡೆಗಳು ೪೦ ಅಡಿಗಳಷ್ಟು ನೀಲಾಕಾಶವನ್ನು ಆವರಿಸಿದವು. ಬಿಳಿಯ ಮೋಡ ಹಿರೋಶಿಮಾ ನಗರವನ್ನು ಆವರಿಸಿತ್ತು. ಕೆಲವು ನಿಮಿಷ ಏನೂ ಕಾಣದಂತಾಯಿತು. ಆಗ ಬಿಡುಗಡೆಯಾದ ಉಷ್ಣಾಂಶ ಸುಮಾರು ಒಂದು ದಶಲಕ್ಷ ಡಿಗ್ರಿ ಸೆಲ್ಷಿಯಸ್. ಒಂದು ಸೆಕೆಂಡ್‌ನಲ್ಲಿ ಬೆಂಕಿಯ ಕೆನ್ನಾಲಗೆ ೨೮೦ ಮೀಟರ್ ಪ್ರದೇಶವನ್ನು ಆವರಿಸಿತು. ಅತಿಯಾದ ಉಷ್ಣಾಂಶ ಹಾಗೂ ಅಣುವಿಕಿರಣ ಎಲ್ಲಾ ಕಡೆಗೂ ಪಸರಿಸಲು ಆರಂಭಿಸಿತು. ೪೦೦ ವರ್ಷಗಳ ಇತಿಹಾಸವಿದ್ದ ಹಿರೋಶಿಮಾ ನಗರ ಕ್ಷಣಾರ್ಧದಲ್ಲಿ ಸುಡುಗಾಡಾಗಿ ಪರಿಣಮಿಸಿತು. ೧,೪೦,೦೦೦ ಜನ, ಲಕ್ಷಾಂತರ ಜಾನುವಾರು ನಶಿಸಿ ಹೋದವು. ಕಟ್ಟಡಗಳು ಸಂಪೂರ್ಣ ಧ್ವಂಸಗೊಂಡವು. ೩,೫೦,೦೦೦ ಜನ ಶಾಶ್ವತ ಅಂಗಹೀನರಾದರು. ತಾಯಿಯ ಗರ್ಭದಲ್ಲಿದ್ದ ಸಾವಿರಾರು ಮಕ್ಕಳು ಅಲ್ಲೇ ನಶಿಸಿಹೋದವು.

೧೯೪೫ ಆಗಸ್ಟ್ ೯ ಬೆಳಗಿನ ೧೧:೦೨ ರ ಸಮಯ ಇತ್ತ ನಾಗಾಸಾಕಿ ನಗರದ ಮೇಲೆ ಸುಮಾರು ೪೭೦ ಮೀಟರ್ ಎತ್ತರದಲ್ಲಿ ಬಿ–೨೯ ಬಾಂಬರ್ ೩.೨ ಮೀಟರ್ ಉದ್ದವಿದ್ದ ೪.೫ ಟನ್ ಭಾರದ 'ಫ್ಯಾಟ್ ಮ್ಯಾನ್' ಎಂಬ ಪ್ಲುಟೋನಿಯಂ ಯುಕ್ತ ಅಣುಬಾಂಬ್ ಸ್ಫೋಟಿಸಿತು. ೨೧ ಟನ್‌ಗಳಷ್ಟು ಅಗಾಧ ಪ್ರಮಾಣದ ಶಕ್ತಿ ಬಿಡುಗಡೆ ಯಾಯಿತು. ಭಾರೀ ಪ್ರಮಾಣದ ಬೆಳಕು ಆಗಸವನ್ನು ಆವರಿಸಿತು. ಕ್ಷಣಾರ್ಧದಲ್ಲಿ ಸುಮಾರು ೭೪ ಸಾವಿರ ಜನ ಬೆಂದು ಹೋದರು. ಹೊಲಗದ್ದೆಗಳಲ್ಲಿ ಕೆಲಸ ಮಾಡುತ್ತಿದ್ದ ಸಾವಿರಾರು ಜನರ ಚರ್ಮ ಕಿತ್ತು ನೇತಾಡತೊಡಗಿತು. ಕಣ್ಣುಗಳು ಮಂಜಾದವು. ಮುಖ ವಿಕಾರವಾಯಿತು. ಕಿವಿಗಳು ಕೇಳದಂತಾದವು. ಹೀಗೆ ಘನಘೋರ ಘಟನೆ ಯೊಂದು ಇಡೀ ವಿಶ್ವವನ್ನೇ ತಲ್ಲಣಗೊಳಿಸಿತು. ಅಮೆರಿಕಾದ ಈ ದುಷ್ಕೃತ್ಯವನ್ನು ಜಗತ್ತಿನಾದ್ಯಂತ ಖಂಡಿಸಲಾಯಿತು.

ಜಪಾನ್ ಬೇಷರತ್ ಶರಣಾಗಿ ಪತ್ರಕ್ಕೆ ಸಹಿ ಹಾಕಿದ ನಂತರ ೧೯೪೫ ಆಗಸ್ಟ್ ೧೪ರಂದು ೬ ವರ್ಷ ನಂತರ ಮಹಾಯುದ್ಧಕ್ಕೆ ತೆರೆಬಿತ್ತು. ಎರಡನೇ ಮಹಾಯುದ್ಧದ ಸಮಯದಲ್ಲಿ ಪರಮಾಣು ಬಾಂಬ್ ಬಳಸದಂತೆ ಅಂತಾರಾಷ್ಟ್ರೀಯ ಸಮುದಾಯ ಹಾಗೂ ಅಮೆರಿಕಾದ

ಸೆನೆಟ್ ಕೂಡ ವಿರೋಧ ವ್ಯಕ್ತಪಡಿಸಿತ್ತು. ಮಿಲಿಟರಿ ನೆಲೆಗಳನ್ನು ಹೊರತುಪಡಿಸಿ ನಗರಗಳ ಮೇಲೆ ಬಾಂಬ್ ಬಳಸದಂತೆ ಒತ್ತಡ ಹೇರಲಾಗಿತ್ತು. ಆದರೆ ಇದಾವುದಕ್ಕೂ ಮಣಿಯದ ಅಮೆರಿಕ ತನ್ನ ದೈತ್ಯ ಶಕ್ತಿಯ ಪ್ರದರ್ಶನಕ್ಕೆ ಮುಂದಾಯಿತು. ಬಾಂಬ್ ಸ್ಫೋಟದ ಪರಿಣಾಮ ಇಂದಿಗೂ ಹಿರೋಶಿಮಾ-ನಾಗಾಸಾಕಿ ನಗರಗಳ ಜನಮನದಲ್ಲೂ ಅಚ್ಚ ಹಸುರಾಗಿ ಉಳಿದಿದೆ.

ಬಾಂಬ್ ಸ್ಫೋಟದ ಸಮಯದಲ್ಲಿ ಬಿ-೨೯ ವಿಮಾನದಲ್ಲಿದ್ದ ಇತ್ತೀಚೆಗೆ ನಿಧನರಾದ ವ್ಯಾನ್ ಕಿರ್ಕ್ ಅಂದು ನಡೆದ ಘನಘೋರ ಹತ್ಯಾಕಾಂಡದ ಬಗ್ಗೆ ಜೀವನ ಪರ್ಯಂತ ಹತಾಶರಾಗಿದ್ದರು. ಇಂತಹ ಘಟನೆ ಜಗತ್ತಿನ ಯಾವ ಮೂಲೆಯಲ್ಲೂ ಮರುಕಳಿಸಬಾರದೆಂದು ಕೊನೆಯುಸಿರಿರುವವರೆಗೆ ಪ್ರಾರ್ಥಿಸಿದ್ದರು.

೭೦ ವರ್ಷಗಳ ನಂತರ ಹಿರೋಶಿಮಾ, ನಾಗಸಾಕಿ ಕರಾಳ ಗುರುತೇ ಇಲ್ಲದ ರೀತಿಯಲ್ಲಿ ಜಗತ್ತೇ ಬೆರಗಾಗುವಂತೆ ಬದಲಾಗಿವೆ. ಈಗ ಆ ನಗರಗಳಲ್ಲಿ ಜನರು ವಾಸಿಸುತ್ತಿದ್ದಾರೆ. ವಿಶ್ವದಲ್ಲೇ ಅತೀವೇಗವಾಗಿ ಚಲಿಸುವ ರೈಲುಗಳಿವೆ. ಎಲ್ಲಾ ರಂಗಗಳಲ್ಲೂ ಜಗತ್ ವಿಸ್ಮಯಗೊಳ್ಳುವ ಸಾಧನೆ ಮಾಡಿದ ದೇಶವೆಂದು ಗುರುತಿಸಿಕೊಂಡಿದೆ. ಇದಕ್ಕೆ ಮುಖ್ಯಕಾರಣ ಪ್ರತಿಯೊಬ್ಬ ಜಪಾನಿಯರ ಉಸಿರು ದೇಶ ಮೊದಲು ಎನ್ನುವ ಮನೋಭಾವನೆಯಾಗಿದೆ. ಈ ಮನೋಧರ್ಮದ ಶಕ್ತಿಯೇ ಆ ಸಣ್ಣದೇಶ ಜಗತ್ತಿನ ಭೂಪಟದಲ್ಲಿ ಮಿನುಗುವಂತಾಗಿದೆ. ಜಪಾನಿಯರಿಗೆ ಸುನಾಮಿಗಳು, ಭೂಕಂಪಗಳು ಹೊಸದೇನಲ್ಲ. ಅವುಗಳು ಅವರ ಬದುಕಿನ ಅವಿಭಾಜ್ಯ ಅಂಗವಾಗಿವೆ. ಆದರೂ ಅವರು ಯೋಚಿಸುವ ರೀತಿ ಬೆರಗುಗೊಳಿಸುತ್ತದೆ. ಅವರ ಯೋಚನಾಲಹರಿಯೇ ಬೇರೆ. ಪ್ರಕೃತಿಯ ವಿಕೋಪಗಳು ಹೊಸದಲ್ಲ. ಆ ದುರಂತಗಳು ನಮಗೆ ಹೊಸಬದುಕನ್ನು ಕಟ್ಟಿಕೊಳ್ಳಲು ಅವಕಾಶಮಾಡಿಕೊಡುತ್ತವೆ ಎನ್ನುವುದು ಪ್ರತಿಯೊಬ್ಬ ಜಪಾನಿಯರ ಮನದಾಳದ ಮಾತು. ಪ್ರತಿಯೊಬ್ಬ ಭಾರತೀಯರಲ್ಲಿ ಜಪಾನಿಯರಂತೆ ದೇಶ ಮೊದಲು ಎನ್ನುವ ಮನೋಧರ್ಮ ಬೆಳೆದರೆ ಎಷ್ಟು ಚಂದ ಅಲ್ಲವೆ? ಅಂತಹ ಭಾವನೆ ಬರಲೆಂದು ಸಿದ್ಧಗಂಗಾ ಆಶಿಸುತ್ತದೆ.

– ಸಂಗ್ರಹ

## ಅಭಿನಂದನೆ



ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು, ಭಿಕ್ಕೋಡು ಹೋಬಳಿ ಕೆಸಗೋಡು ಗ್ರಾಮದ ಲೇ. ಕೆ.ಪಿ. ಶಿವೇಗೌಡರ ಮಕ್ಕಳಾದ ಶ್ರೀ ಕೆ.ಎಸ್. ತೀರ್ಥಪ್ಪನವರು ಶ್ರೀಮಠದ ಅಭಿಮಾನಿಗಳು, ಸಿದ್ಧಗಂಗಾ ಮಾಸ ಪತ್ರಿಕೆಗೆ ನೂರಾರು ಓದುಗ ಸದಸ್ಯರನ್ನು ಮಾಡಿಕೊಡುವುದರ ಜೊತೆಗೆ ಶ್ರೀಮಠದ ಸೇವಾ ಕೈಂಕರ್ಯಗಳನ್ನು ಪ್ರಚಾರ ಮಾಡುತ್ತಾ ಪೂಜ್ಯರ ಕೃಪೆಗೆ ಪಾತ್ರರಾಗಿದ್ದಾರೆ.

ಇವರು ೧೯೭೫ರ ತುರ್ತುಪರಿಸ್ಥಿತಿಯಲ್ಲಿ ದೇಶದ ನಾಡುನುಡಿಗಳ ಬಗ್ಗೆ ಚಿಂತಿಸುತ್ತ ದೇಶ ಪರ ಘೋಷಣೆ ಗಳನ್ನು ಕೂಗುತ್ತಾ ಈ ಸಂಬಂಧ ನೂರಾರು ಹಿತಚಿಂತಕರೊಂದಿಗೆ ಹಾಸನದಲ್ಲಿ ಜೈಲುವಾಸವನ್ನು ಅನುಭವಿಸಿರುತ್ತಾರೆ, ಇವರ ಧೈರ್ಯ, ದೇಶಾಭಿಮಾನ ನಾಡುನುಡಿಗಳ ಬಗ್ಗೆ ಇರುವ ಪ್ರೇಮವನ್ನು ಮೆಚ್ಚಿ ಜೂನ್ ೨೮, ೨೦೧೫ರಂದು ಮೈಸೂರಿನಲ್ಲಿ ಶ್ರೀಯುತರಿಗೆ 'ಸತ್ಯಾಗ್ರಹಿ'ಯೆಂದು ಗುರುತಿಸಿ ಗೌರವಿಸಿರುತ್ತಾರೆ. ಶ್ರೀಯುತರನ್ನು 'ಸಿದ್ಧಗಂಗಾ' ಅಭಿನಂದಿಸುತ್ತದೆ.





# ಮದ್ಯಪಾನ ಮತ್ತು ಪ್ರಾಕೃತಿಕ ಪರಿಹಾರ

– ಡಾ. ಗಂಗಾಧರ ವರ್ಮ*

ಮದ್ಯಪಾನ ಮಿತಿ ಮೀರಿದಾಗ ಅದೊಂದು ರೋಗವಾಗಿ ಪರಿಣಮಿಸುವುದೆಂಬುದನ್ನು ಸೂಚಿಸಲು "ಆಲ್ಕೊಹಾಲಿಸಮ್" (ಮದ್ಯವ್ಯಸನ) ಎಂಬ ಪದವನ್ನು ೧೮೪೯ ರಲ್ಲಿ ಮೊದಲ ಬಾರಿಗೆ ಬಳಸಿದಾತ ಸ್ವೀಡಿಷ್ ವೈದ್ಯ, ಮ್ಯಾಗ್ನಸ್ ಹಸ್. ಆ ಬಳಿಕ ಈ ಪದವು ಎಲ್ಲೆಡೆ ಬಳಕೆಗೆ ಬಂತು.

ಮದ್ಯಸೇವನೆಯನ್ನು ಆರಂಭಿಸುವ ವ್ಯಕ್ತಿಯು, ಕುಡಿತವನ್ನು ಒಂದು ಅಭ್ಯಾಸವಾಗಿ ಮಾಡಿಕೊಂಡು, ಕಾಲಕ್ರಮೇಣ ಅದರ ದಾಸನಾಗುವ ಅಥವಾ ಮದ್ಯವ್ಯಸನಿಯಾಗುವ ಪ್ರಕ್ರಿಯೆಯು ೫ ಮುಖ್ಯ ಹಂತಗಳನ್ನೊಳಗೊಂಡಿವೆ ಎಂದು ಈಲಿಯಟ್ ಮತ್ತು ಮೆರಿಲ್ ಪ್ರಸ್ತಾಪಿಸಿದ್ದಾರೆ. ಅವುಗಳೆಂದರೆ:

**(೧) ದಿನ ಬೆಳಗಿನ ಕುಡಿತ :** ಮದ್ಯಪಾನಿಯು ವ್ಯಸನಿಯಾಗುತ್ತಿದ್ದಾನೆನ್ನುವ ಆರಂಭಿಕ ಸೂಚನೆಯಿದು. ದಿನಂಪ್ರತಿ ಬೆಳಿಗ್ಗೆ ಕುಡಿತವನ್ನು ಆರಂಭಿಸುತ್ತಾನೆ. ನರ ದೌರ್ಬಲ್ಯಕ್ಕೆ ಒಳಗಾಗಿರುವ ಈ ವ್ಯಕ್ತಿ ದುರ್ಬಲವಾಗಿರುವ ನರಗಳನ್ನು ಸಚೇತನಗೊಳಿಸಲು ಮದ್ಯಸೇವನೆ ಅಗತ್ಯ ಹಾಗೂ ಅನಿವಾರ್ಯವೆಂಬುದಾಗಿಯೂ ಭಾವಿಸುತ್ತಾನೆ.

**(೨) ಪಲಾಯನ ಕುಡಿತ :** ಜೀವನದ ಸಮಸ್ಯೆಗಳನ್ನು ಎದುರಿಸಲಾಗದೆ, ವೃತ್ತಿ ಅಥವಾ ಮನೆ ಸಂಬಂಧಿತ ಸಮಸ್ಯೆ-ಸವಾಲುಗಳನ್ನು ಧೈರ್ಯದಿಂದ ಪರಿಹರಿಸಲಾಗದೆ, ಪಲಾಯನವಾದಿಗಳಾಗಿ ಕುಡಿತಕ್ಕೆ ಜೋತು ಬೀಳುತ್ತಾರೆ.

**(೩) ಹೆಚ್ಚುತ್ತಾ ಸಾಗುವ ಮದ್ಯಸೇವನೆ :** ಸಮಸ್ಯೆಗಳಿಂದ ತಾತ್ಕಾಲಿಕವಾಗಿ ಬಿಡುಗಡೆ ಬಯಸಿ ಕುಡಿಯಲಾರಂಭಿಸಿ, ಅದರ ಪ್ರಮಾಣ ಹೆಚ್ಚುತ್ತಿರುವ ಅರಿವನ್ನು ಹೊಂದಿದರೂ, ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಾರದ್ದಾಗಿರುತ್ತದೆ.

**(೪) ಕುಡಿತ ಮತ್ತು ಸಾಮಾಜಿಕ ಕಾರ್ಯಗಳು :** ತನ್ನ ಎಲ್ಲ ಕೆಲಸಗಳ ಪ್ರೇರಣೆಗಾಗಿ ಆತ ಮದ್ಯಸೇವನೆಯನ್ನು ಅವಲಂಭಿಸಿರುತ್ತಾನೆ. ಬೆಳಗಿನ ಕೆಲಸವನ್ನು ಆರಂಭಿಸಲು, ಸಂಜೆಯನ್ನು ಕಳೆಯಲು, ಬೇಸರ ನೀಗಿಸಿಕೊಳ್ಳಲು, ಸ್ನೇಹಿತರೊಂದಿಗೆ ಆನಂದವನ್ನು ಹಂಚಿಕೊಳ್ಳಲು – ಹೀಗೆ ಎಲ್ಲದಕ್ಕೂ ಆತನಿಗೆ ಮದ್ಯ ಬೇಕೇ ಬೇಕು ಎನಿಸುತ್ತದೆ. ಮದ್ಯಸೇವನೆಗೆ ಆಸ್ಪದವಿಲ್ಲದ ಯಾವುದೇ ಕೂಟವೂ ಹಿತವೆನಿಸುವುದಿಲ್ಲ.

**(೫) ಉಗ್ರವಾದ ಅಥವಾ ಅತಿರೇಕದ ವರ್ತನೆ :** ಐದನೆಯ ಹಾಗೂ ಈ ಕೊನೆಯ ಹಂತವು "ಮದ್ಯವ್ಯಸನ". ವ್ಯಕ್ತಿಯು ಸಭ್ಯತೆಯನ್ನು ಬದಿಗೊತ್ತಿ, ಭ್ರಮಿಷ್ಟನಾದವನಂತೆ, ವಿಪರೀತ ಪ್ರಮಾಣದಲ್ಲಿ ಕುಡಿಯತೊಡಗುತ್ತಾನೆ. ಈ ಸ್ಥಿತಿಯಲ್ಲಿ ಆತನ ವರ್ತನೆ ಬಹಳ ಉಗ್ರವಾಗಿರುತ್ತದೆ. ಕೆಲವೊಮ್ಮೆ ಬಹಳಷ್ಟು ಅಪಾಯಕಾರಿಯಾಗಿರುತ್ತದೆ.

ಈ ಜನಪ್ರಿಯವಾದ ಮದ್ಯದ ರಾಸಾಯನಿಕ ಹೆಸರು "ಈಥೈಲ್ ಆಲ್ಕೋಹಾಲ್" ಅಥವಾ "ಇಥೆನಾಲ್". ಒಂದು ಅಂದಾಜಿನ ಅಂಕಿ-ಅಂಶಗಳ ಪ್ರಕಾರ ಪ್ರಥಮ ಬಾರಿಗೆ ಮಾನಸಿಕ ಆಸ್ಪತ್ರೆಗೆ ಸೇರುವವರಲ್ಲಿ ಶೇ.೧೫ ರಿಂದ ೨೦ ರಷ್ಟು ವ್ಯಕ್ತಿಗಳು ಮದ್ಯಜನ್ಯ ಮನೋವಿಕೃತಿಯಿಂದ ಕೂಡಿದ ಮದ್ಯವ್ಯಸನಿಗಳೆಂದು ಅಂದಾಜು ಮಾಡಲಾಗಿದೆ. ಇದರೊಂದಿಗೆ ಪ್ರತಿವರ್ಷವೂ ಸುಮಾರು ಎರಡು ಲಕ್ಷ ಜನರು ಹೊಸದಾಗಿ ಮದ್ಯವ್ಯಸನಿಗಳಾಗುತ್ತಿದ್ದಾರೆಂದು ಗುರುತಿಸಲಾಗಿದೆ.

ಸಾಮಾನ್ಯವಾಗಿ ವ್ಯಕ್ತಿಯು ಎಷ್ಟು ಮದ್ಯ ಸೇವಿಸಿದ್ದಾನೆಂಬುದು ಆತನ ಅಮಲು ನಿರ್ಧರಿಸುತ್ತದೆ. ಆತನ ರಕ್ತದಲ್ಲಿ ಸೇರಿದ ಮದ್ಯದ ಅಂಶವು ನಿರ್ಧರಿಸುತ್ತದೆ.

ರಕ್ತದಲ್ಲಿ ಮದ್ಯದ ಪ್ರಮಾಣವು ಶೇ.೦.೧ಕ್ಕೆ ಏರಿದಾಗ ವ್ಯಕ್ತಿಯು ಅಮಲಿಗೊಳಗಾಗುತ್ತಾನೆ. ಸ್ನಾಯು ಸಮನ್ವಯತೆ, ಮಾತು, ದೃಷ್ಟಿ ತೊಂದರೆಗೊಳಗಾಗಿರುತ್ತವೆ ಮತ್ತು ಯೋಚನಾ ಪ್ರಕ್ರಿಯೆಗಳು ಗೊಂದಲಮಯವಾಗಿರುತ್ತವೆ.

ರಕ್ತದಲ್ಲಿನ ಮದ್ಯದ ಪ್ರಮಾಣವು ಶೇ.೦.೮ಕ್ಕೆ ಏರಿದಾಗ, ನರಮಂಡಲದ ವ್ಯವಸ್ಥೆಯ ಸಮತೋಲನ ಪೂರ್ಣವಾಗಿ ಹದಗೆಟ್ಟು ವ್ಯಕ್ತಿಯು ಪ್ರಜ್ಞಾಹೀನನಾಗುತ್ತಾನೆ.

* ಮುಖ್ಯ ವೈದ್ಯಾಧಿಕಾರಿಗಳು, ತಪೋವನ, ಆಯುರ್ವೇದ ವೈದ್ಯಕೀಯ ಕಾಲೇಜು, ದೊಡ್ಡಬುತ್ತಿ, ದಾವಣಗೆರೆ.

### ಕುಡಿತದ-ದುಷ್ಪರಿಣಾಮಗಳು

ಮದ್ಯವ್ಯಸನಿಯ ಆಯುಷ್ಯಾವಧಿ ಸಾಮಾನ್ಯರಿಗಿಂತ ಸುಮಾರು ೧೦ ರಿಂದ ೧೮ ವರ್ಷಗಳಷ್ಟು ಕಡಿಮೆ ಯಾಗಿರುತ್ತದೆ. ವ್ಯಕ್ತಿಯ ಮರಣಕ್ಕೆ ಮದ್ಯವ್ಯಸನವೂ ಒಂದು ಪ್ರಮುಖ ಕಾರಣವಾಗಿದೆ. ಈಗಿನ ಹೆಚ್ಚಿರುವ ಅಪಘಾತಗಳು ಹಾಗೂ ಅನಾಹುತಗಳಿಗೆ ಪ್ರಮುಖವಾಗಿ ಮದ್ಯವ್ಯಸನವೇ ಒಂದು ಕಾರಣವೆಂದು ನಂಬಲಾಗಿದೆ.

ಅತಿಯಾಗಿ ಕುಡಿತಕ್ಕೆ ಬಲಿಯಾದವನು ತನ್ನ ಜೀವನದ ಸಮಸ್ಯೆಗಳನ್ನು ಎದುರಿಸಲಾರನು. ಹಾಗಾಗಿ ಅವನ ವ್ಯಕ್ತಿತ್ವ ಅವನತಿ ಹೊಂದುವುದಲ್ಲದೆ, ಬೌದ್ಧಿಕ ಮತ್ತು ನೈತಿಕ ಜೀವನವೂ ಹಾಳಾಗುತ್ತದೆ.

* ಅತಿಯಾದ ಕುಡಿತದಿಂದ ವ್ಯಕ್ತಿಯ ವರ್ತನೆ ಅಸಭ್ಯ ವಾಗಿರುತ್ತದೆ ಮತ್ತು ಅಸಂಬದ್ಧವಾಗಿರುತ್ತದೆ. ಜವಾಬ್ದಾರಿಯನ್ನು ಕಳೆದುಕೊಳ್ಳುವುದರಿಂದ ಕುಟುಂಬ ವನ್ನು ಅಲಕ್ಷ್ಯ ಮಾಡುತ್ತಾನೆ. ಸಾಮಾಜಿಕವಾಗಿ ತನ್ನ ಗೌರವವನ್ನು ಕಳೆದುಕೊಳ್ಳುತ್ತಾನೆ.
* ಈ ಕುಡಿತದಿಂದ ಸಿಡುಕು ಸ್ವಭಾವ ಮೈಗೂಡುತ್ತದೆ. ಆಹಾರವನ್ನು ತ್ಯಜಿಸಿ ಕುಡಿಯಲಾರಂಭಿಸುವುದರಿಂದ ವಿಟಮಿನ್ ಮತ್ತು ಅನ್ನಾಂಗಗಳ ಕೊರತೆಗಳಿಗೆ ಒಳಗಾಗುತ್ತಾನೆ.

### ನರಮಂಡಲ

ಪದೇ ಪದೇ ಕುಡಿಯುವುದರಿಂದ ನರಗಳು ಜೋಮು ಹಿಡಿಯುತ್ತವೆ. ಕೈ-ಕಾಲುಗಳ ಸಂವೇದನಾ ಶಕ್ತಿ ಕುಂದುತ್ತದೆ. ಮೆದುಳಿನ ಜೀವಕೋಶಗಳಿಗೆ ಹಾನಿಯುಂಟಾಗಿ ಸ್ಮರಣಶಕ್ತಿ ಕುಗ್ಗುತ್ತದೆ. ಗೊಂದಲ, ಭ್ರಮೆ ಉಂಟಾಗುತ್ತದೆ. ಇದರ ಜೊತೆಯಲ್ಲಿ ಫಿಟ್ಸ್ (ಸೆಳೆವು), ಖಿನ್ನತೆ, ಮರೆವು, ಅಪರಾಧಿ ಪ್ರಜ್ಞೆ ಮತ್ತು ಆತ್ಮಹತ್ಯಾ ಪ್ರವೃತ್ತಿಯು ತಲೆದೋರುತ್ತದೆ.

### ಹೃದಯ

ಮದ್ಯಪಾನದಿಂದ ರಕ್ತದ ಒತ್ತಡ ಅಸ್ಥಿರವಾಗುತ್ತದೆ ಮತ್ತು ನಾಡಿಯ ಬಡಿತ ಕ್ರಮ ತಪ್ಪುತ್ತದೆ. ಇದು ಹೃದಯದ ಸ್ನಾಯುಗಳನ್ನು ನಿಶಕ್ತಗೊಳಿಸಿ ಹೃದಯ ವೈಫಲ್ಯಕ್ಕೆ ಕಾರಣ ವಾಗುತ್ತದೆ. ಇದನ್ನೇ 'ಆಲ್ಕೋಹಾಲಿಕ್ ಕಾರ್ಡಿಯೋ ಮಯೋಪತಿ' ಎನ್ನುತ್ತಾರೆ.

### ಲಿವರ್

ಮದ್ಯವು ಯಕೃತ್ತನ್ನು ತಲುಪಿದ ನಂತರ, ಅಲ್ಲಿನ ಜೀವಕೋಶಗಳು ಊದಿಕೊಳ್ಳುವುದಲ್ಲದೆ ಅದರ ಮೂಲಕ ಹಾದುಹೋಗುವ ರಕ್ತನಾಳಗಳು ಬಿಗಿಯತೊಡಗುತ್ತವೆ ಮತ್ತು ಲಿವರಿನ ಕಾರ್ಯಕ್ಷಮತೆ ಕುಂದುತ್ತದೆ. ಇದು 'ಹೆಪಟೈಟಿಸ್' ಮತ್ತು 'ಲಿವರ್ ಸಿರೋಸಿಸ್' ಎಂಬ ಮಾರಣಾಂತಿಕ ಕಾಯಿಲೆಗಳಿಗೂ ದಾರಿಯಾಗುತ್ತದೆ.

### ಜೀರ್ಣಾಂಗವ್ಯೂಹ

ಮದ್ಯಪಾನವು ಅತಿ ಉಷ್ಣತೆಯನ್ನು ಹೊಂದಿರುತ್ತದೆ. ಇದು ಜೀರ್ಣಾಂಗವ್ಯೂಹದ ಮೂಲಕವೇ ದೇಹವನ್ನು ಸೇರುತ್ತದೆ. ಮದ್ಯವು ಜೀರ್ಣಾಂಗದ ಜೀವಕೋಶಗಳನ್ನು ಸೋಕುವುದರಿಂದ ಉರಿಯೂತ (ಇನ್‌ಪ್ಲೆಮೇಶನ್) ಕಾಣಿಸಿ ಕೊಂಡು ಪಚನಶಕ್ತಿಯನ್ನು ಕಡಿಮೆಗೊಳಿಸುತ್ತದೆ. ಈ ಉರಿಯೂತವು ಮುಂದುವರಿದು ಗ್ಯಾಸ್ಟ್ರೈಟಿಸ್, ಜಠರ ಅಥವಾ ಕರುಳಿನ ಹುಣ್ಣಾಗಿ ಬೆಳೆಯುತ್ತದೆ. ಇದರ ಜೊತೆಯಲ್ಲಿ ಮಲಬದ್ಧತೆಗೂ ಕಾರಣವಾಗುತ್ತದೆ.

### ಮಾಂಸಖಂಡಗಳು

ಮದ್ಯಪಾನವು ನರಗಳ ಕಾರ್ಯಕ್ಷಮತೆಯನ್ನು ಕಡಿಮೆಗೊಳಿ ಸುವುದರಿಂದ ದೇಹದ ಸ್ನಾಯುಗಳಲ್ಲಿ ನೋವು ಕಾಣಿಸಿಕೊಳ್ಳುತ್ತದೆ. ಅತಿಯಾದ ಸೇವನೆಯಿಂದ ಜೀವಕೋಶ ಗಳ ಸಂಖ್ಯೆ ಕಡಿಮೆಯಾಗುವುದಲ್ಲದೆ ಸ್ನಾಯುಗಳು ಕ್ಷೀಣವಾಗುತ್ತವೆ ಮತ್ತು ಸ್ನಾಯು ಪೊರೆಗಳು ಸವೆದು ಸಡಿಲಗೊಳ್ಳುತ್ತವೆ.

* ಮೇದೋಜೀರಕ ಗ್ರಂಥಿ, ಚರ್ಮ ಮತ್ತು ಜೀವಸತ್ವಗಳ ಮೇಲೆ ಮದ್ಯಪಾನ ಪರಿಣಾಮ ಬೀರಿ ತೊಂದರೆಗೊಳ ಪಡಿಸುತ್ತದೆ. ಚರ್ಮಧ ಸೋಂಕುಗಳು ಪ್ರಾರಂಭ ವಾಗುವು ದಲ್ಲದೆ, ಚರ್ಮದ ಕಾಂತಿಯು ದಿನೇ ದಿನೇ ಕಡಿಮೆಗೊಳ್ಳುತ್ತದೆ.
* ಮದ್ಯದ ವಾಸನೆಯು ಶ್ವಾಸಕೋಶಗಳಿಂದ ಹೊರ ಹೋಗುವುದರಿಂದ ಇದಕ್ಕೂ ಕೂಡ ಧಕ್ಕೆಯನ್ನುಂಟು ಮಾಡಿ ಕ್ಷಯರೋಗದಂತಹ ತೀವ್ರ ತೆರನಾದ ಹಲವು ಅಂಟು ಜಾಡ್ಯಗಳಿಗೆ ಕಾರಣವಾಗುತ್ತದೆ.
* ಮದ್ಯಪಾನವು ದೇಹದ ರೋಗನಿರೋಧಕ ಶಕ್ತಿಯನ್ನು ಕಡಿಮೆಗೊಳಿಸುವುದರಿಂದ, ಎಲ್ಲ ರೀತಿಯ ರೋಗ ಗಳನ್ನು ಉಲ್ಬಣಗೊಳಿಸುತ್ತವೆ ಹಾಗೂ ಹೊಸ ರೋಗಗಳಿಗೆ ಆಹ್ವಾನವನ್ನು ನೀಡುತ್ತದೆ.
* ಮದ್ಯಪಾನದಿಂದ ಸ್ಥೂಲಕಾಯ, ಅಧಿಕ ಟ್ರೈಗ್ಲಿಸರಾಯಿಡ್, ಲೈಂಗಿಕ ಅತೃಪ್ತಿ, ಹೈಪೋಗ್ಲೈಸಿಮಿಯ, ಗೌಟ್, ಬೆರಿಬೆರಿ,





ರಕ್ತ ಹೀನತೆ ಮೊದಲಾದ ಅಡ್ಡಪರಿಣಾಮಗಳು ಉಂಟಾಗುತ್ತವೆ.

### ಚಿಕಿತ್ಸೆ

ಮದ್ಯ ಸೇವನೆಯನ್ನು ನಿಲ್ಲಿಸಲು ಅತಿ ಮುಖ್ಯವಾಗಿ ಬೇಕಾಗುವುದು ಮನಸ್ಸಿನ ಇಚ್ಛಾಶಕ್ತಿ. ಇದಕ್ಕೆ ಸಮಾಜ, ಆರೋಗ್ಯ ಕಾರ್ಯಕರ್ತರು, ವೈದ್ಯರು, ಮಾನಸಿಕ ತಜ್ಞರು, ಮಾಧ್ಯಮದವರು ಕೈಜೋಡಿಸಿ, ಮದ್ಯಪಾನದಿಂದ ದೇಹದ ಮೇಲಾಗುವ ದುಷ್ಪರಿಣಾಮಗಳನ್ನು ಕುರಿತು ತಿಳಿಹೇಳು ವುದರ ಜೊತೆಗೆ ಮತ್ತು ಮದ್ಯದ ಬಗೆಗಿನ ಮೂಢನಂಬಿಕೆ ಗಳನ್ನು ಹೋಗಲಾಡಿಸುವುದರಿಂದ ಮನಸ್ಸಿನ ಇಚ್ಛಾಶಕ್ತಿಯನ್ನು ಹೆಚ್ಚಿಸುವುದಲ್ಲದೆ, ಸಮಾಜವನ್ನು ದುಶ್ಚಟಮುಕ್ತಗೊಳಿಸ ಬಹುದು.

ಸರಕಾರದವರು ಮದ್ಯದ ಮೇಲೆ ಅತ್ಯಧಿಕ ತೆರಿಗೆ, ಮದ್ಯ ನಿಷೇಧ ಕಾನೂನು ಮತ್ತು ಮದ್ಯ ಸೇವನೆಯಿಂದ ದೇಹದ ಮೇಲಾಗುವ ದುಷ್ಪರಿಣಾಮಗಳ ಚಿತ್ರಗಳನ್ನು ಪ್ರಕಟಿಸಿ ಜನಸಾಮಾನ್ಯರಲ್ಲಿ ಇದರ ಬಗ್ಗೆ ಭಯ ಮತ್ತು ಜಿಗುಪ್ಸೆ ಹುಟ್ಟಿಸುವ ಪ್ರಯತ್ನಗಳನ್ನು ಕಾನೂನಿನ ಮೂಲಕ ಮೂಡಿಸುವುದು ಹಾಗೂ ಜಾರಿಗೊಳಿಸುವುದು.

ಆಧುನಿಕ ಜೀವನ ಶೈಲಿಯ ಒತ್ತಡಗಳೊಂದಿಗೆ ಮದ್ಯಪಾನ ಸೇರಿದಾಗ ಇದು ನಮ್ಮನ್ನು ರೋಗಗ್ರಸ್ತರನ್ನಾಗಿ ಮಾಡುವುದರಲ್ಲಿ ಸಂದೇಹವಿಲ್ಲ. ನಾವು ಆದಷ್ಟು ನಮ್ಮ ಸಮಯವನ್ನು ಆರೋಗ್ಯಕರ ಕೆಲಸಗಳಲ್ಲಿ ತೊಡಗಿಸಿದಲ್ಲಿ ದುಶ್ಚಟಗಳಿಗೆ ದಾಸರಾಗುವ ಪ್ರಚೋದನೆಯಿಂದ ತಪ್ಪಿಸಿಕೊಳ್ಳ ಬಹುದು. ಈ ದುಷ್ಟ ಚಟಗಳನ್ನು ಒಂದು ಕಾಯಿಲೆಯೆಂದೇ ಪರಿಗಣಿಸಿ, ಇದನ್ನು ಗುಣಪಡಿಸುವಲ್ಲಿ ಒಂದು ಸಾಮಾಜಿಕ ಆಂದೋಲನದಂತಹ ಪ್ರಯತ್ನ ನಡೆದಲ್ಲಿ ಮಾತ್ರ ಇದನ್ನು ಸಮಾಜದಿಂದ ಆಮೂಲಾಗ್ರವಾಗಿ ಕಿತ್ತೊಗೆಯಲು ಸಾಧ್ಯ.

ಮದ್ಯ ಸೇವನೆಯನ್ನು ನಿಲ್ಲಿಸಿದ ನಂತರ, ವ್ಯಕ್ತಿಯ ಮೇಲೆ ಮಾನಸಿಕ ಒತ್ತಡವಾಗುತ್ತದೆ. ಇದರ ಸೇವನೆಯನ್ನು ನಿಲ್ಲಿಸುವ ಪ್ರಯತ್ನದಲ್ಲಿ ಕೆಲವು ಬಗೆಯ ತೊಂದರೆಗಳು ತಲೆದೋರಬಹುದು. ಅವುಗಳನ್ನು ಕೆಲವು ರೀತಿಯ ಚಿಕಿತ್ಸೆಗಳಿಂದ ಯಶಸ್ವಿಯಾಗಿ ನಿಭಾಯಿಸಬಹುದು.

* ಮದ್ಯ ಸೇವನೆಯ ಬದಲು, ಮನಸ್ಸನ್ನು ಬೇರೆ ಕೆಲಸಗಳಲ್ಲಿ ತೊಡಗಿಸಿದಾಗ, ಅದರ ತುಡಿತದ ತೀವ್ರತೆಯನ್ನು ಕಡಿಮೆ ಮಾಡಬಹುದು.
* ಮದ್ಯದ ಮೇಲೆ ಸಂಪೂರ್ಣವಾಗಿ ಅವಲಂಬಿತ ನಾಗಿರುವ ವ್ಯಕ್ತಿಗೆ ಒಂದೇ ಸಾರಿ ಇದನ್ನು ನಿಲ್ಲಿಸಲು ಸಾಧ್ಯವಾಗದಿದ್ದಲ್ಲಿ ಕ್ರಮೇಣವಾಗಿಯಾದರೂ ಸಂಪೂರ್ಣವಾಗಿ ನಿಲ್ಲಿಸುವುದು.
* ಮದ್ಯಪಾನವನ್ನು ನಿಲ್ಲಿಸಿದ ನಂತರ, ವ್ಯಸನಿಗಳಿಗೆ ಅದರ ಹಂಬಲ ಹೆಚ್ಚಾಗುತ್ತದೆ. ಅಂತಹ ಸಮಯದಲ್ಲಿ ಹುಳಿ ಇರುವಂತಹ ಹಣ್ಣುಗಳಾದ ನಿಂಬೆ, ಕಿತ್ತಳೆ, ದ್ರಾಕ್ಷಿ ಮುಂತಾದ ಹಣ್ಣಿನ ರಸಗಳನ್ನು ನೀಡುವುದ ರೊಂದಿಗೆ ಸ್ವಲ್ಪ ಮಟ್ಟಿನಲ್ಲಿ ಸುಧಾರಿಸಬಹುದು.
* ಮದ್ಯಸೇವನೆಯಿಂದ ಸ್ಮರಣಶಕ್ತಿ ಕಡಿಮೆಯಾಗಿರುವುದು ಹಾಗೂ ನಿಲ್ಲಿಸುವುದರಿಂದ ಉಂಟಾಗುವ ಗೊಂದಲ, ಭ್ರಮೆಗಳನ್ನು ನಿವಾರಿಸಲು, ಆದಷ್ಟು ನೀರನ್ನು ತೆಗೆದು ಕೊಳ್ಳುವುದು, ಊಟದಲ್ಲಿ ಹೆಚ್ಚು ತರಕಾರಿಗಳನ್ನು ಬಳಸುವುದು ಹಾಗೂ ಮೊಳಕೆ ಬರಿಸಿದ ಕಾಳುಗಳ ಸೇವನೆಯಿಂದ ಹತೋಟಿಗೆ ತರಬಹುದು.
* ಮದ್ಯಸೇವನೆಯ ಸ್ಥಗಿತದಿಂದ ಉಂಟಾಗುವ ಸುಸ್ತಾಗುವಿಕೆ, ಮೈಕೈ ನೋವು, ಕೋಪಗಳನ್ನು ಸೇಬುಹಣ್ಣಿನ ರಸ, ನಿಂಬೆರಸ, ಜೇನುತುಪ್ಪ, ಮಜ್ಜಿಗೆ ಮುಂತಾದವುಗಳ ಸೇವನೆಯಿಂದ ನಿವಾರಿಸಬಹುದು.

ಮದ್ಯ ಸೇವನೆಯಿಂದ ದೇಹ ಮತ್ತು ದೇಹದ ಅಂಗಾಂಗಗಳ ಮೇಲಾದ ಪರಿಣಾಮಗಳನ್ನು ಪ್ರಕೃತಿ ಚಿಕಿತ್ಸೆ ಮತ್ತು ಯೋಗದ ಮೂಲಕ ಸಾಧ್ಯವಾದಷ್ಟು ಸರಿಪಡಿಸಿ ಕೊಳ್ಳಬಹುದು.

### ಮೊದಲು ದೇಹದ ಶುದ್ಧೀಕರಣಕ್ಕಾಗಿ ಉಪವಾಸ ಚಿಕಿತ್ಸೆ

ಉಪವಾಸವನ್ನು ಆರಂಭಿಸುವುದಕ್ಕೆ ಮುಂಚೆ ಒಂದು ದಿನ ಊಟ, ನಂತರದ ದಿನ ತರಕಾರಿಗಳು, ನಂತರ ಹಣ್ಣುಗಳು. ಅದಾದ ನಂತರ ವ್ಯಕ್ತಿಗೆ ಸಾಧ್ಯವಾದಷ್ಟು ೨ ರಿಂದ ೩ ದಿನಗಳು ಪೂರ್ಣವಾಗಿ ೪ ರಿಂದ ೬ ಗ್ಲಾಸ್‌ನಷ್ಟು ಸೇಬು ಅಥವಾ ಕಿತ್ತಳೆ ಅಥವಾ ಮೋಸಂಬಿ ಅಥವಾ ಕ್ಯಾರೆಟ್ ಅಥವಾ ನಿಂಬೆರಸ ಮತ್ತು ಜೇನುತುಪ್ಪವನ್ನು ತೆಗೆದು ಕೊಳ್ಳುವುದು. ದಿನಕ್ಕೆ ೨ ರಿಂದ ೩ ಲೀಟರ್‌ನಷ್ಟು ನೀರನ್ನು ತೆಗೆದುಕೊಳ್ಳುವುದರಿಂದ ದೇಹದ ಶುದ್ಧೀಕರಣವಾಗುವು ದಲ್ಲದೆ, ದೇಹದಲ್ಲಿ ಶೇಖರಣೆಗೊಂಡಂತಹ ಮಲ

ಪದಾರ್ಥಗಳು ಸಂಪೂರ್ಣವಾಗಿ ದೇಹದಿಂದ ಹೊರ ಹಾಕಲ್ಪಡುತ್ತವೆ. ಉಪವಾಸವನ್ನು ಆರಂಭಿಸಿದ ರೀತಿಯಲ್ಲಿಯೇ ಮುಕ್ತಾಯಗೊಳಿಸುವುದು. ಮೊದಲು ಹಣ್ಣುಗಳಿಂದ ಉಪವಾಸವನ್ನು ನಿಲ್ಲಿಸಿ, ನಂತರ ತರಕಾರಿಗಳು, ಅದಾದ ನಂತರ ಊಟವನ್ನು ತೆಗೆದುಕೊಳ್ಳುವುದು.

ಮದ್ಯಪಾನದಿಂದ ಅಧಿಕವಾಗಿ ಹಾನಿಗೊಳ್ಳುವ ಅಂಗ "ಯಕೃತ್ತು". ಇದರಿಂದ ಜಾಂಡೀಸ್, ಹೆಪಟೈಟಿಸ್ ಮತ್ತು ಲಿವರ್ ಸಿರೋಸಿಸ್‌ನಂತಹ ಕಾಯಿಲೆಗಳು ಬರುವುದನ್ನು ತಡೆಯಲು ಮತ್ತು ಅದರ ಚಿಕಿತ್ಸೆಗಾಗಿ–

ಯಕೃತ್ತಿನ ಮೇಲೆ ಒತ್ತಡವನ್ನು ಹೇರದಂತಹ ಆಹಾರವನ್ನು ತೆಗೆದುಕೊಳ್ಳುವುದು. ದಿನನಿತ್ಯದ ಆಹಾರದಲ್ಲಿ ತರಕಾರಿಯ ಬಳಕೆಯನ್ನು ಹೆಚ್ಚಿಸುವುದರಿಂದ ಇದರಲ್ಲಿರುವ ಶರ್ಕರ ಪಿಷ್ಟ, ವಿಟಮಿನ್‌ಗಳು ಮತ್ತು ನಾರಿನಾಂಶಗಳು ದೇಹದ ಜೊತೆಯಲ್ಲಿ ಯಕೃತ್ತನ್ನು ಕೂಡ ಆರೋಗ್ಯದಾಯಕ ಹಾಗೂ ಚೈತನ್ಯದಾಯಕ ಗೊಳಿಸುತ್ತದೆ.

ಮದ್ಯಪಾನವು ದೇಹದ ಇನ್ನೊಂದು ಅಂಗವಾದ ಪ್ಯಾನ್‌ಕ್ರಿಯಾಸ್‌ನ ಜೀವಕೋಶಗಳನ್ನು ಹಾಳುಮಾಡುವುದರಿಂದ, ಅದರಲ್ಲಿ ಉತ್ಪತ್ತಿಯಾಗುವ ಇನ್ಸುಲಿನ್ ಪ್ರಮಾಣದಲ್ಲಿ ಏರು–ಪೇರು ಉಂಟಾಗಿ, ಮಧುಮೇಹ ಕಾಯಿಲೆ ಉಂಟಾಗುತ್ತದೆ.

ಈ ಲಿವರ್ ಮತ್ತು ಪ್ಯಾಂಕ್ರಿಯಾಸ್ ತೊಂದರೆ ಗಳನ್ನು ತಡೆಯಲು ಆದಷ್ಟು ಸಿಹಿ ಪದಾರ್ಥಗಳು, ಮಾಂಸಾಹಾರ, ಕೊಬ್ಬಿನ ಅಂಶದ ಆಹಾರ, ಎಣ್ಣೆ ಪದಾರ್ಥಗಳು, ಕರಿದು–ಹುರಿದು ಸಂಸ್ಕರಿಸಿದ ತಿಂಡಿ–ತಿನಿಸುಗಳು, ಬೆಣ್ಣೆ, ತುಪ್ಪ, ಬೇಕರಿ ಪದಾರ್ಥಗಳನ್ನು ಕಡಿಮೆಗೊಳಿಸುವುದು.

ದಿನಕ್ಕೆ ಒಂದು ಬಾರಿ ಜಿ.ಹೆಚ್. ಪಟ್ಟಿ ಮತ್ತು ಒಂದು ಬಾರಿ ತಣ್ಣೀರಿನ ಕಟಿಸ್ನಾನವನ್ನು ಮಾಡುವುದು. ಈ ಎರಡು ಸುಲಭ ಚಿಕಿತ್ಸೆಗಳು ಹೊಟ್ಟೆಯ ಎಲ್ಲ ಅಂಗಾಂಗ ಗಳನ್ನು ಪ್ರಚೋದಿಸುತ್ತವೆ ಮತ್ತು ಈ ಭಾಗಕ್ಕೆ ರಕ್ತ ಸಂಚಾರವನ್ನು ಹೆಚ್ಚಿಸಿ ಅಂಗಾಂಗಗಳ ಕಾರ್ಯವೈಖರಿ ಯನ್ನು ಹೆಚ್ಚಿಸುತ್ತವೆ.

***ಜಿ. ಹೆಚ್. ಪಟ್ಟಿ (ಗ್ಯಾಸ್ಟ್ರೋ-ಹೆಪಟಿಕ್ ಪ್ಯಾಕ್)***

ಬಿಸಿ ನೀರಿನ ಚೀಲವನ್ನು ಹೊಟ್ಟೆಯ ಭಾಗದ ಮೇಲಿಟ್ಟು, ಮಂಜುಗಡ್ಡೆಯ ಚೀಲವನ್ನು ಬೆನ್ನಿನ ಕೆಳಭಾಗದಲ್ಲಿಟ್ಟು ದಪ್ಪನೆಯ ಬಟ್ಟೆಯಿಂದ ಪಟ್ಟಿ ಹಾಕುವುದು. ಅವಧಿ : ೨೦ ರಿಂದ ೩೦ ನಿಮಿಷಗಳು.

***ತಣ್ಣೀರಿನ ಕಟಿ ಸ್ನಾನ***

ಟಬ್‌ನ್ನು ಪೂರ್ಣವಾಗಿ ತಣ್ಣೀರಿನಿಂದ ತುಂಬಿಸುವುದು. ಇದರಲ್ಲಿ ಹೊಕ್ಕಳಿನ ಭಾಗದಿಂದ ತೊಡೆಯ ಮಧ್ಯಭಾಗದ ವರೆಗೂ ನೀರಿನಲ್ಲಿರುವಂತೆ ಕುಳಿತುಕೊಳ್ಳುವುದು. ಕಾಲುಗಳನ್ನು ಯಾವುದಾದರೂ ಸ್ಟೂಲ್, ಫುಟ್‌ರೆಸ್ಟ್‌ನ ಮೇಲಿಡುವುದು ಅಥವಾ ಚಪ್ಪಲಿ ಧರಿಸಿರುವುದು. ಅವಧಿ : ೨೦ ನಿಮಿಷಗಳು.

***ಸೂರ್ಯಸ್ನಾನ***

ಸೂರ್ಯ ಕಿರಣಗಳಲ್ಲಿ ಅಗಾಧಶಕ್ತಿ ಅಡಕವಾಗಿದೆ. ಸೂರ್ಯ ಕಿರಣಗಳಲ್ಲಿ ವಿವಿಧ ಬಣ್ಣಗಳಿವೆ. ಅವುಗಳು ಮಾನವನ ಶರೀರದ ಮೇಲೆ ತಮ್ಮದೇ ಆದ ಪರಿಣಾಮಗಳನ್ನು ಬೀರುತ್ತವೆ.

***ವಿಧಾನ***

* ಮುಂಜಾನೆಯ ಎಳೆ ಬಿಸಿಲಿನಲ್ಲಿ ಅಥವಾ ಸಾಯಂಕಾಲ ೪ ಗಂಟೆಯ ನಂತರ ಸೂರ್ಯ ಸ್ನಾನ ಮಾಡಬೇಕು.
* ಸೂರ್ಯ ಸ್ನಾನದ ಪೂರ್ವದಲ್ಲಿ ೨–೩ ಗ್ಲಾಸ್ ನೀರು ಕುಡಿಯಬೇಕು ಮತ್ತು ತಲೆಯ ಮೇಲೆ ಒಂದು ತಣ್ಣೀರಿನ ಬಟ್ಟೆ ಇಟ್ಟುಕೊಳ್ಳಬೇಕು.
* ನಂತರ ಕನಿಷ್ಠ ಬಟ್ಟೆಯೊಂದಿಗೆ ೧೦–೨೦ ನಿಮಿಷಗಳವರೆಗೆ ಸೂರ್ಯನ ಕಿರಣಗಳಿಗೆ ಮೈ ಒಡ್ಡಬೇಕು.
* ಸೂರ್ಯಸ್ನಾನದ ನಂತರ ತಣ್ಣೀರಿನಿಂದ ಸ್ನಾನ ಮಾಡುವುದು ಉತ್ತಮ.

ಮದ್ಯಪಾನವು ಜೀರ್ಣಾಂಗವ್ಯೂಹದ ಸಂಪರ್ಕಕ್ಕೆ ಬರುವುದರಿಂದ ಇಲ್ಲಿನ ಜೀವಕೋಶಗಳನ್ನು ನಾಶಪಡಿಸುತ್ತದೆ. ಆರಂಭದಲ್ಲಿ ಜೀರ್ಣಾಂಗಗಳನ್ನು ಪ್ರಚೋದಿಸಿ, ಹೆಚ್ಚು ಹೆಚ್ಚು ಜೀವಕೋಶಗಳು ಉತ್ಪತ್ತಿಯಾಗುವಂತೆ ಮಾಡುತ್ತದೆ. ನಂತರದ ದಿನಗಳಲ್ಲಿ ಇವನ್ನು ಸಂಪೂರ್ಣವಾಗಿ ಹಾನಿಗೊಳಪಡಿಸುತ್ತದೆ.

ಮದ್ಯಪಾನವು ರಕ್ತಕ್ಕೆ ಸೇರುವುದರಿಂದ ಹೃದಯದ ಜೀವಕೋಶಗಳು ಹಾಗೂ ನರಗಳ ಕೋಶಗಳನ್ನು ಸಹ ಹಾನಿಗೊಳಿಸುತ್ತದೆ. ಇದರ ಜೊತೆಯಲ್ಲಿ ಅಧಿಕ ಕೊಬ್ಬಿನಾಂಶ





ವನ್ನು ಹೊಂದಿರುವುದರಿಂದ ದೇಹದಲ್ಲಿ ಅಧಿಕ ಸ್ಥೂಲಕಾಯ ಮತ್ತು ಕೊಲೆಸ್ಟ್ರಾಲ್ ತೊಂದರೆಗಳಿಗೆ ಕಾರಣವಾಗುತ್ತದೆ.

* ಈ ತೊಂದರೆಗಳ ಚಿಕಿತ್ಸೆಗಾಗಿ ಆದಷ್ಟು ಹಣ್ಣುಗಳನ್ನು (ಹುಳಿ ಇರುವಂತಹವು), ಆಹಾರದಲ್ಲಿ ತರಕಾರಿಗಳೊಂದಿಗೆ ಸೇವಿಸುವುದು.
* ದಿನಕ್ಕೆ ಒಂದು ಬಾರಿ ಶುಂಠಿ ಅಥವಾ ತುಳಸಿ ಕಷಾಯವನ್ನು ತೆಗೆದುಕೊಳ್ಳುವುದು.
* ಹೆಚ್ಚಾಗಿ ನೀರನ್ನು ಸೇವಿಸುವುದು.
* ಬೆನ್ನಿನ ಮಧ್ಯಭಾಗಕ್ಕೆ ತಣ್ಣನೆ ಪಟ್ಟಿಯನ್ನು ಹಾಕುವುದು – ಅವಧಿ : ೨೦ ನಿಮಿಷಗಳು.
* ಕಪ್ಪನೆಯ ಶುದ್ಧವಾದ ಮಣ್ಣನ್ನು ನೀರಿನೊಂದಿಗೆ ಬೆರೆಸಿ, ತೆಳು ಮಿಶ್ರಣವನ್ನು ಮಾಡಿಕೊಂಡು ಸಂಪೂರ್ಣ ದೇಹಕ್ಕೆ ಅಥವಾ ಪೂರ್ಣ ಬೆನ್ನಿಗೆ ಲೇಪನ ಮಾಡಿ. ೨೦ ನಿಮಿಷಗಳು ಸೂರ್ಯನ ಬಿಸಿಲಿನಲ್ಲಿ ನಿಂತು, ನಂತರ ತಣ್ಣೀರಿನಿಂದ ಸ್ನಾನವನ್ನು ಮಾಡುವುದು.
* ವಾರಕ್ಕೊಮ್ಮೆಯಾದರೂ ಗೋದಿಹುಲ್ಲಿನ ರಸವನ್ನು ೬೦ ಸಿಸಿಯಷ್ಟು ತೆಗೆದುಕೊಳ್ಳುವುದು ಒಂದು ಉತ್ತಮ ಪರಿಹಾರ.

***ಗೋದಿ ಹುಲ್ಲು ಬೆಳೆಯುವ ವಿಧಾನ***

ಶಕ್ತಿಯುತ ಗೋದಿ ಬೀಜಗಳನ್ನು ಯಾವುದೇ ರಾಸಾಯನಿಕ ಬಳಸದೇ ಸಾವಯವ ಮಣ್ಣಿನಲ್ಲಿ ಬಿತ್ತಬೇಕು. ನಿಯಮಿತವಾಗಿ ನೀರು ಹಾಕುತ್ತಿರಬೇಕು. ಕೆಲವು ದಿನಗಳಲ್ಲಿ ಹಸಿರು ಹುಲ್ಲು ಸೇವನೆಗೆ ಸಿದ್ಧವಾಗುತ್ತದೆ. ಇದನ್ನು ಬೇರುಸಹಿತ ಕಿತ್ತು ತೆಗೆಯಬೇಕು.

***ಯೋಗ ಚಿಕಿತ್ಸೆ***

ಪಾನಮುಕ್ತರು ತಮ್ಮಿಂದ ಎಷ್ಟು ಆಸನ ಮಾಡಲು ಸಾಧ್ಯವೋ ಅಷ್ಟು ಮಾತ್ರ ಮಾಡುವುದು. "ಸ್ಥಿರಂ ಸುಖಮಾಸನಂ". ಸ್ಥಿರವಾಗಿ, ಸುಖವಾಗಿ ಇರಬಲ್ಲ ಭಂಗಿಯೇ ಆಸನ. ಹಾಗಾಗಿ ಸಾಧ್ಯವಾದಷ್ಟನ್ನು ಮಾತ್ರ ಮಾಡುವುದು.

***ಪೂರಕವಾದ ಆಸನಗಳು***

– ಸೂರ್ಯ ನಮಸ್ಕಾರಗಳು (೨ ರಿಂದ ೪ ಬಾರಿ) ವಿಶ್ರಾಂತಿ ಕ್ರಿಯೆ.

***ನಿಂತು ಮಾಡುವ ಆಸನಗಳು***

(೧) ತ್ರಿಕೋನಾಸನ (೨) ಅರ್ಧ ಚಕ್ರಾಸನ (೩) ಅರ್ಧ ಕಟಿ ಚಕ್ರಾಸನ

***ಬೆನ್ನ ಮೇಲೆ ಮಲಗಿ ಮಾಡುವ ಆಸನಗಳು***

(೧) ಪವನ ಮುಕ್ತಾಸನ (೨) ಉತ್ಥಿತ ಪಾದಾಸನ

***ಹೊಟ್ಟೆಯ ಮೇಲೆ ಮಲಗಿ ಮಾಡುವ ಆಸನಗಳು***

(೧) ಭುಜಂಗಾಸನ (೨) ಸರಳ ಧನುರಾಸನ

***ಕುಳಿತು ಮಾಡುವ ಆಸನಗಳು***

(೧) ವಕ್ರಾಸನ (೨) ಅರ್ಧ ಮತ್ಸ್ಯೇಂದ್ರಾಸನ ವಿಶ್ರಾಂತಿ ಕ್ರಿಯೆ.

ಪ್ರಾಣಾಯಾಮದ ಅಭ್ಯಾಸವು ದೇಹಕ್ಕೆ ಹೆಚ್ಚು ಆಮ್ಲಜನಕವನ್ನು ನೀಡುವುದರಿಂದ ದೇಹದ ಜೀವಕೋಶಗಳನ್ನು, ನರಮಂಡಲವನ್ನು ಚೈತನ್ಯದಾಯಕಗೊಳಿಸುತ್ತದೆ.

* ನಾಡಿ ಶೋಧನ ಪ್ರಾಣಾಯಾಮ * ಶೀತಲೀ ಪ್ರಾಣಾಯಾಮ * ಶೀತಕಾರಿ ಪ್ರಾಣಾಯಾಮ * ಭ್ರಾಮರಿ ಪ್ರಾಣಾಯಾಮ.

ಪ್ರತ್ಯಾಹಾರ, ಧಾರಣ ಮತ್ತು ಧ್ಯಾನದ ಅಭ್ಯಾಸವು ಸಂಪೂರ್ಣವಾಗಿ ಮನಸ್ಸನ್ನು ಹಿಡಿತಕ್ಕೆ ತರಲು ಸಹಕರಿಸುವುದರಿಂದ ದುಶ್ಚಟಗಳಿಂದ ದೂರವಾಗಬಹುದು.

* ತ್ರಾಟಕ * ಧ್ಯಾನ

ಪ್ರಕೃತಿ ಚಿಕಿತ್ಸೆ ಮತ್ತು ಯೋಗದ ಈ ನಿಯಮಗಳನ್ನು ಸರಿಯಾಗಿ ಪಾಲಿಸಿದಲ್ಲಿ ಯಾವುದೇ ರೀತಿಯ ಮಾತ್ರೆ ಮತ್ತು ಚುಚ್ಚುಮದ್ದುಗಳು ಪಾನಮುಕ್ತರಿಗೆ ಬೇಕಾಗುವುದಿಲ್ಲ.

"ಮರಳಿ ಪ್ರಕೃತಿಗೆ" ಎನ್ನುವ ರೀತಿ ನಮ್ಮ ಜೀವನದಲ್ಲಿ ಕೆಲವೊಂದು ಪ್ರಕೃತಿ ನಿಯಮಗಳನ್ನು ಅಳವಡಿಸಿಕೊಂಡಲ್ಲಿ, ಪಾನಮುಕ್ತರಾಗಿ ಸಂಪೂರ್ಣವಾಗಿ ಗುಣಮುಖರಾಗುವುದಲ್ಲದೆ ಒಳ್ಳೆಯ ಆರೋಗ್ಯವನ್ನೂ ಪಡೆದು, ಸಮಾಜದಲ್ಲಿ ಗೌರವ, ಮರ್ಯಾದೆ, ಆದರಗಳನ್ನು ಪಡೆಯುವುದರ ಜೊತೆಗೆ ಸುಖಿಗಳಾಗಿ ಬಾಳಲು ಸಾಧ್ಯವಾಗುವುದರಲ್ಲಿ ಸಂದೇಹವಿಲ್ಲ.

# ವಾತಕಫಹರ ಅಗಲಶುಂಠಿ

## Cissampelos pareira Linn Menispermaceae

– ಡಾ॥ ಶೈಲೇಶ್ ಎಂ.ಡಿ. *

ಸಾವಿರಾರು ಔಷಧಿ ದ್ರವ್ಯಗಳು ಆಯುರ್ವೇದದಲ್ಲಿ ಬಳಕೆಯಾಗಿ, ಮಾನವನ ರೋಗರುಜಿನಗಳನ್ನು ದೂರ ಮಾಡಿ ಯಶಸ್ವೀ ಚಿಕಿತ್ಸೆಯಲ್ಲಿ ಉಪಯೋಗಿಸಲ್ಪಡುತ್ತಿದ್ದವು. ಆದರೆ ಈಗಿನ ಕಾಲದ ಜನರಿಗೆ ಅದರ ಅರಿವಿಲ್ಲದೇ ಅದನ್ನು ನಾಶಮಾಡುವ ಮಟ್ಟಕ್ಕೆ ಬೆಳೆಯುತ್ತಿದ್ದಾರೆ ಎಂದರೆ ತಪ್ಪಾಗಲಾರದು. ಇದಕ್ಕೆ ಕಾರಣ ಅವರಲ್ಲಿರುವ ಅರಿವಿನ ಕೊರತೆ. ಅರಿವಿಲ್ಲದವರಿಗೆ ಅರಿವು ಮೂಡಿಸುವುದು, ಔಷಧಿ ಸಸ್ಯಗಳ ಗುಣಧರ್ಮದ ಬಗ್ಗೆ ತಿಳಿಸುವುದು, ಔಷಧಿ ಸಸ್ಯಗಳ ಗುಣಧರ್ಮದ ಬಗ್ಗೆ ತಿಳಿಸುವುದು ಆಯುರ್ವೇದ ವಿದ್ಯಾರ್ಥಿಯಾದ ನನ್ನ ಕರ್ತವ್ಯವೆಂಬ ನಿಟ್ಟಿನಲ್ಲಿ ಅನೇಕ ಸಸ್ಯಗಳ ಬಗ್ಗೆ ವಿವರವಾದ ವಿವರಣೆಯನ್ನು ಈಗಾಗಲೇ ತಿಳಿಸಿರುವೆನು. ಇನ್ನು ಮುಂದೆಯು ನನ್ನಿಂದ ಸಾಧ್ಯವಾಗುವಷ್ಟು ತಿಳಿಸುತ್ತೇನೆ. ಅಂತಹ ತಿಳಿಯಬೇಕಾದ ದ್ರವ್ಯಗಳಲ್ಲಿ ಅಗಲಶುಂಠಿಯು ಒಂದು. ಚರಕನು ಅಗಲಶುಂಠಿಯನ್ನು ಸಂಧಾನೀಯ 'ಜ್ವರಹರ' 'ಸ್ತನ್ಯಶೋಧಕ' ವರ್ಗದಲ್ಲಿ ವಿವರಿಸಿದರೆ ಸುಶ್ರುತ ಮತ್ತು ವಾಗ್ಭಟನು ಈ ದ್ರವ್ಯವನ್ನು 'ಮುಸ್ತಾದೀ 'ಅರಗ್ವದಾದೀ' 'ಪಟೋಲಾದೀ' ವರ್ಗದಲ್ಲಿ ವಿವರಿಸಿದ್ದಾರೆ.

***ಬಹು ಭಾಷಾ ಹೆಸರುಗಳು***

| | | |
|---|---|---|
| ಕನ್ನಡ | : | ಅಗಲಶುಂಠಿ |
| ಸಂಸ್ಕೃತ | : | ಪಾಠಾ |
| ಹಿಂದಿ | : | ಪಾಠಾ |
| ಇಂಗ್ಲಿಷ್ | : | ಫಾಲ್ಸ್ ಪೆರೇಯಿರಾ |
| ತುಳು | : | ಆಡೆಬಳ್ಳಿ |

***ಪರ್ಯಾಯ ಪದಗಳು***

ಪಾಠಾ, ಅಂಬಾಸ್ಥಾ, ಪ್ರಾಚೀನಾ, ಶ್ರೇಯಾಸಿ, ದೀಪನೀ, ವರತಿಕ್ತಾ, ದೇವಿ, ತಿಕ್ತಾಪುಷ್ಪಾ, ಅತಿಸಾರನಾಶಿನಿ, ಅವಿದ್ಧಕರ್ಣೀ, ಪೀಲುಫಲಾ, ಏಕಸ್ಥೀಲಾ, ರಸ.

ಅಗಲಶುಂಠಿಯು ತಿಕ್ತರಸದಿಂದ ಕೂಡಿರುವುದರಿಂದ ಇದನ್ನು 'ವರತಿಕ್ತಾ' ಎಂದು ಸಂಸ್ಕೃತದಲ್ಲಿ ಕರೆಯುತ್ತಾರೆ.

***ದ್ರವ್ಯದ ವರ್ಣನೆ***

ಅಗಲಶುಂಠಿ ಒಂದು ಬಳ್ಳಿ ಎಲೆಯು ಹಸಿರಾಗಿದ್ದು, ಹೃದಯಾಕಾರದಿಂದ ಕೂಡಿದೆ. ಎಲೆಯು ೨.೫–೧೦ ಸೆಂ.ಮೀ. ನಷ್ಟು ಉದ್ದವಾಗಿದೆ. ಎಲೆಯದೇಟು ೩–೧೦ ಸೆಂ.ಮೀಟರ್ ಉದ್ದವಾಗಿದೆ. ಎಲೆ ಮತ್ತು ಉಪಶಾಖೆಯು ರೋಮಭರಿತವಾಗಿದೆ. ಹೂವು ನಸು ಹಳದಿ ಬಣ್ಣದಿಂದ ಕೂಡಿದೆ. ಹಣ್ಣು ರೋಮಗಳಿಂದ ಕೂಡಿದ್ದು, ಕೆಂಪು ಬಣ್ಣದಿಂದ ಕೂಡಿದೆ. ಈ ದ್ರವ್ಯವು ಹೂವನ್ನು ಮಳೆಗಾಲದಲ್ಲಿ ಬಿಡುತ್ತದೆ. ಸಾಮಾನ್ಯವಾಗಿ ಭಾರತದೆಲ್ಲೆಡೆ ಈ ದ್ರವ್ಯವು ಹೂವನ್ನು ಮಳೆಗಾಲದಲ್ಲಿ ಬಿಡುತ್ತದೆ. ಸಾಮಾನ್ಯವಾಗಿ ಭಾರತದೆಲ್ಲೆಡೆ ಬೆಳೆಯುವ ಈ ದ್ರವ್ಯವು ಉಷ್ಣ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುತ್ತದೆ.

**ವಿಧಗಳು :** ಕೈಯ್ಯದೇವನ ಪ್ರಕಾರ ಅಗಲಶುಂಠಿಯಲ್ಲಿ ಎರಡು ಬಗೆಗಳಿವೆ.

೧. ರಾಜಪಾಠಾ (Cyclea peltata)

೨. ಲಘುಪಾಠಾ (Cissampelos pereira)

***ಉಪಯುಕ್ತ ಅಂಗಗಳು***

* ಬೇರು

***ದ್ರವ್ಯದ ಗುಣಧರ್ಮಗಳು***

| | | |
|---|---|---|
| ರಸ | : | ತಿಕ್ತ |
| ಗುಣ | : | ಲಘು, ತೀಕ್ಷ್ಣ |
| ವೀರ್ಯ | : | ಉಷ್ಣ |
| ವಿಪಾಕ | : | ಕಟು |
| ಕರ್ಮ | : | ಕಫವಾತಹರ, ವಿಷಘ್ನ, ಗ್ರಾಹೀ, ಬಲ್ಯ |

* ಆಳ್ವಾಸ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಮೂಡಬಿದರೆ, ಮಂಗಳೂರು.





*ಪಾಠೋಷ್ಣಾ ಕಟುಕಾ ತೀಕ್ಷ್ಣಾ ವಾತಶ್ಲೇಷ್ಮಹರೀ ಲಘುಃ ।*
*ಹಂತಿಶೂಲಜ್ವರಛರ್ದಿಕುಷ್ಠಾತಿಸಾರಹೃದ್ರುಜಃ ॥*

(ಭಾವಪ್ರಕಾಶ)

ಅಗಲಶುಂಠಿಯು ಕಟು ರಸದಿಂದ ಕೂಡಿದೆ. ಲಘು, ತೀಕ್ಷ್ಣ, ಗುಣದಿಂದ ಕೂಡಿದೆ. ಉಷ್ಣವೀರ್ಯದಿಂದ ಕೂಡಿದೆ. ವಾತಕಫಹರವಾಗಿದೆ. ಶೂಲ, ಜ್ವರ, ವಾಂತಿ, ಕುಷ್ಠ, ಅತಿಸಾರ, ಹೃದಯರೋಗಗಳನ್ನು ನಿವಾರಿಸುತ್ತದೆ.

***ಔಷಧಿ ಪ್ರಮಾಣ***

| | | |
|---|---|---|
| ಚೂರ್ಣ | : | ೧–೩ ಗ್ರಾಂ |
| ಕಷಾಯ | : | ೫೦–೧೦೦ ಮಿ.ಲೀ |

***ಔಷಧೀಯ ಯೋಗಗಳು***

* ಪುಷ್ಯಾನುಗ ಚೂರ್ಣ
* ಸಾಧಾರಣ ಯೋಗ
* ಗಂಗಾಧರ ಚೂರ್ಣ
* ಕುಟಜಾಷ್ಟಕ ಕ್ವಾಥ

***ಔಷಧೀಯ ಉಪಯೋಗಗಳು***

* ಅಗಲಶುಂಠಿಯನ್ನು ಮಜ್ಜಿಗೆಯೊಂದಿಗೆ ಸೇವಿಸುವುದರಿಂದ ಮೂಲವ್ಯಾಧಿ ರೋಗ ನಿವಾರಣೆ.
* ಅಗರು ಮತ್ತು ಅಗಲಶುಂಠಿಯ ಕಷಾಯಸೇವನೆಯಿಂದ ಪ್ರಮೇಹ ರೋಗ ನಿವಾರಣೆ.
* ಅಗಲಶುಂಠಿಯ ಬೇರಿನ ರಸವನ್ನು ನಶ್ಯವಾಗಿ ಉಪಯೋಗಿಸುವುದರಿಂದ ಅರ್ಧತಲೆನೋವು ನಿವಾರಣೆ.
* ಅಗಲಶುಂಠಿಯ ಬೇರಿನ ರಸವನ್ನು ಬೆಳಿಗ್ಗೆ ಮೂರು ದಿವಸದವರೆಗೆ ಸೇವಿಸುವುದರಿಂದ ಚಳಿಯಿಂದ ಕೂಡಿದ ಜ್ವರ ನಿವಾರಣೆ.
* ಅಗಲಶುಂಠಿಯಿಅನ್ನು ಮೊಸರಿನೊಂದಿಗೆ ಸೇವಿಸುವುದರಿಂದ ಉರಿಯಿಂದ ಕೂಡಿದ ಅತಿಸಾರ ಪರಿಹಾರ.
* ಅಗಲಶುಂಠಿ, ಪಂಚಕೋಲದಿಂದ ತಯಾರಿಸಿದ ಕಷಾಯವನ್ನು ಸೇವಿಸುವುದರಿಂದ ಊತ, ಹೃದಯ ರೋಗ, ಗುಲ್ಮಾ ಮೂಲವ್ಯಾಧಿ ರೋಗ ನಿವಾರಣೆಯಾಗುತ್ತದೆ.
* ಅಗಲಶುಂಠಿಎಲೆ, ಅಮೃತಬಳ್ಳಿ ಎಲೆ,. ಕಾಕಮಾಚೀ ಎಲೆ, ಅರಿಶಿನ ಎಲೆ, ಮೂರ್ವಾ ಎಲೆಯಿಂದ ಗಾಯವನ್ನು ರಕ್ಷಿಸುವುದರಿಂದ ಗಾಯವು ನಿವಾರಣೆ.
* ಅಗಲಶುಂಠಿ ಬೇರನ್ನು ಅಕ್ಕಿ ತೊಳೆದ ನೀರಿನಲ್ಲಿ ಅರೆದು ಸೇವಿಸುವುದರಿಂದ ಪ್ಲೀಹವೃದ್ಧಿ ರೋಗ ನಿಯಂತ್ರಣಕ್ಕೆ ಬರುತ್ತದೆ.
* ಅಗಲಶುಂಠಿ ಎಲೆ ಮತ್ತು ಬೇರಿನ ಲೇಪ ಹಚ್ಚುವುದರಿಂದ ಚರ್ಮರೋಗ, ವಿಷರೋಗ ನಿವಾರಿಸಲ್ಪಡುತ್ತದೆ.

### ಬೂದಿಗುಂಬಳಕಾಯಿ

ಬೂದಿಗುಂಬಳವು ತಂಪು ಗುಣವುಳ್ಳದ್ದು. ಮೂತ್ರದ ಕಟ್ಟು ಉರಿಮೂತ್ರಗಳನ್ನು ಶಾಂತಗೊಳಿಸುವುದು, ಮೂತ್ರಕೋಶದ ವಿಕಾರವನ್ನು ನಿವಾರಿಸುವುದು. ಪಾಂಡುರೋಗ, ಜ್ವರ, ಕ್ಷಯ, ರಕ್ತದ ವಾಂತಿ, ರಕ್ತದ ಭೇದಿ ಇವುಗಳಿಗೆ ಶಮನಕಾರಿಯಾದುದು. ಯಕೃತ್ತು (ಲಿವರ್) ಮತ್ತು ಹೊಟ್ಟೆಯಲ್ಲಿ ಸೇರಿರುವ ಕಾವನ್ನು ಶಾಂತಿಗೊಳಿಸುವುದು. ಶುದ್ಧ ರಕ್ತವನ್ನು ಹುಟ್ಟಿಸುವುದು, ದೇಹ ಪುಷ್ಟಿಯನ್ನು ಕೊಟ್ಟು ವೀರ್ಯ ಮತ್ತು ಬಲವನ್ನು ಸ್ಥಿರಗೊಳಿಸುತ್ತದೆ. ಮಂದಾಗ್ನಿ, ಮೇಹವ್ಯಾಧಿಯನ್ನು ನಿವಾರಿಸಿ ಕೃಮಿರೋಗ ಮುಂತಾದವುಗಳ ತೊಂದರೆಯನ್ನು ದೂರಮಾಡುತ್ತದೆ. ಮತ್ತು ಕ್ಷಯ ಅಜೀರ್ಣ, ಸಂಗ್ರಹಣೆ, ಮೂತ್ರದ ಕಲ್ಲು, ರೋಗಿಗಳಿಗೆ ಇದನ್ನು ಆಹಾರ ರೂಪವಾಗಿ ಕೊಡುವುದರಿಂದ ವಿಶೇಷ ಪ್ರಯೋಜನವುಂಟಾಗುತ್ತದೆ. ಈ ಕುಂಬಳದ 3 ತೊಲ ರಸದಲ್ಲಿ 4 ಗುಂಜಿ ಯವಕ್ಷಾರ ಮತ್ತು 2 ಗುಂಜಿ ಹುರಿದ ಹಿಂಗು ಇವುಗಳನ್ನು ಅರೆದು ಕುಡಿಯುವುದರಿಂದ ಬೊಟ್ಟೆಯ ಶೂಲ, ಮೂತ್ರನಾಳದ ಶೂಲ, ಸಕ್ಕರೆ ರೋಗ ನಿವಾರಣೆಯಾಗುವುದು ಮೂತ್ರದಲ್ಲಿನ ಕಲ್ಲು ಕರಗುತ್ತದೆ.

ಬೂದಿಗುಂಬಳದ ಬೀಜ, ಸೌತೆಕಾಯಿಯ ಬೀಜ, ಇವೆರಡನ್ನೂ ನೀರನೊಡನೆ ಅರೆದು ಬೊಟ್ಟೆಗೆ ಮಂದವಾಗಿ ಲೇಪಿಸುವುದರಿಂದ ಮೂತ್ರದ ತಡೆಯು ದೂರವಾಗಿ ಮೂತ್ರವಿಸರ್ಜನೆಯು ಆಯಾಸವಿಲ್ಲದೆ ಆಗುತ್ತದೆ. ಬೂದಿಗುಂಬಳದ ರಸಕ್ಕೆ ಯವಕ್ಷಾರ ಮತ್ತು ಬೆಲ್ಲವನ್ನು ಕೂಡಿಸಿ ಕುಡಿಯುವುದರಿಂದ ಮೂತ್ರದ ತಡೆ, ಮೂತ್ರದ ಕಲ್ಲು ಮತ್ತು ಸಕ್ಕರೆ ಹೋಗುವಿಕೆ ಮುಂತಾದವುಗಳು ಗುಣವಾಗುತ್ತವೆ.

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೬೬೫. | ಶ್ರೀ ಎಸ್. ಮಲ್ಲನಗೌಡ, ಕಲಬುರ್ಗಿ (ಸೇಡಂ) | ೧೦೦೦.೦೦ |
| ೬೬೬. | ಶ್ರೀ ಬಸವಣ್ಣಗೌಡ, ಕಲಬುರ್ಗಿ (ಸೇಡಂ) | ೧೦೦೦.೦೦ |
| ೬೬೭. | ಶ್ರೀ ಎಂ. ಬಸವರಾಜು, ಬೆಂಗಳೂರು | ೧೦೦೦.೦೦ |
| ೬೬೮. | ಶ್ರೀ ಆರ್. ಮಹದೇವಯ್ಯ, ಬೆಂಗಳೂರು | ೧೦೦೧.೦೦ |
| ೬೬೯. | ಶ್ರೀ ಶಿವಣ್ಣ, ತುಮಕೂರು | ೧೦೦೧.೦೦ |
| ೬೭೦. | ಶ್ರೀ ಬಸವರಾಜು, ಬೆಂಗಳೂರು | ೧೦೦೧.೦೦ |
| ೬೭೧. | ಶ್ರೀ ಎಸ್. ಗಂಗಾಧರಯ್ಯ, ಬೆಂಗಳೂರು | ೧೦೦೧.೦೦ |
| ೬೭೨. | ಶ್ರೀ ಟಿ.ಪಿ. ಪರಮೇಶ್ವರಯ್ಯ, ತೊಂಡಗೆರೆ | ೫೦೦.೦೦ |
| ೬೭೩. | ಶ್ರೀ ಹೆಚ್.ಜಿ. ಶಿವಲಿಂಗಮೂರ್ತಿ, ಬೆಂಗಳೂರು | ೧೦೦೦.೦೦ |
| ೬೭೪. | ಶ್ರೀ ಎನ್.ಆರ್. ಮಲ್ಲಿಕಾರ್ಜುನಯ್ಯ, ಬೆಂಗಳೂರು | ೫೦೦.೦೦ |
| ೬೭೫. | ಶ್ರೀ ಟಿ. ಚನ್ನಬಸವಯ್ಯ, ತಾಳಗುಂದ | ೧೦೦೦.೦೦ |
| ೬೭೬. | ಶ್ರೀ ಬಿ.ಎಸ್. ಪರ್ವತರಾಜು, ಮೈಸೂರು | ೧೦೦೦.೦೦ |
| ೬೭೭. | ಶ್ರೀ ಎಸ್. ಕುಮಾರಸ್ವಾಮಿ, ತುಮಕೂರು | ೧೦೦೦.೦೦ |
| ೬೭೮. | ಶ್ರೀ ಸದಾಶಿವಯ್ಯ, ಅರಿಮನಪುರ | ೧೦೦೦.೦೦ |
| ೬೭೯. | ಶ್ರೀ ಜಿ. ಚಂದ್ರಶೇಖರಯ್ಯ, ಬೆಂಗಳೂರು | ೧೦೦೦.೦೦ |
| ೬೮೦. | ಶ್ರೀ ಜಗದಾಂಬ ಮತ್ತು ಶ್ರೀ ಜಿ.ಎಸ್. ಜಗದೀಶ್, ಬೆಂಗಳೂರು | ೧೦,೦೦೦.೦೦ |
| ೬೮೧. | ಶ್ರೀ ಹೆಚ್.ವಿ. ವೀರಪ್ಪಾಜಿ, ಬೆಂಗಳೂರು | ೫೦೦.೦೦ |
| ೬೮೨. | ಶ್ರೀ ಕಿರಣ್ ಮತ್ತು ಕುಟುಂಬ, ಬೆಂಗಳೂರು | ೧೦೦೦.೦೦ |
| ೬೮೩. | ಶ್ರೀ ಹರ್ಷವರ್ಧನ ಗೌರಪ್ಪ, ಬೆಂಗಳೂರು | ೮೨,೦೦೦.೦೦ |
| ೬೮೪. | ಶ್ರೀ ವಿ.ಆರ್. ಸ್ವಾಮಿ, ಬೆಂಗಳೂರು | ೧೦,೧೦೮.೦೦ |
| ೬೮೫. | ಶ್ರೀ ಸಿ. ಪುಟ್ಟರಾಜು, ಚೋಳನಾಯಕನಹಳ್ಳಿ | ೧೦೦೦.೦೦ |
| ೬೮೬. | ಶ್ರೀಮತಿ ನೀಲಾಂಬಿಕೆ ರಾಜೇಶ್, ಬೆಂಗಳೂರು | ೫೧೦೧.೦೦ |
| ೬೮೭. | ಶ್ರೀ ಕೆ.ಪಿ. ರಮೇಶ್, ಕುಂದರನಹಳ್ಳಿ | ೨೦೦೦.೦೦ |
| ೬೮೮. | ಶ್ರೀ ಎನ್.ಎಂ. ಮಲ್ಲಣ್ಣ, ಹಣಬಾಳ್ | ೧೦೦೦.೦೦ |
| ೬೮೯. | ಶ್ರೀ ರೇಣುಕಾಂಬ, ಉಪ್ಪಿನಹಳ್ಳಿ | ೧೦೦೦.೦೦ |
| ೬೯೦. | ಶ್ರೀ ಎಸ್. ಶಿವಪ್ರಸಾದ್, ಬೆಂಗಳೂರು | ೧೦೦೦೦.೦೦ |
| ೬೯೧. | ಶ್ರೀ ಎಸ್. ರುದ್ರಯ್ಯ, ಬೆಂಗಳೂರು | ೨೫೦೧.೦೦ |
| ೬೯೨. | ಶ್ರೀ ಹೆಚ್.ಬಿ. ವೀರಭದ್ರಯ್ಯ, ಬೆಂಗಳೂರು | ೧೦೦೮.೦೦ |
| ೬೯೩. | ಶ್ರೀ ಆರ್.ಎಸ್. ಕಸ್ತೂರಿ, ಬೆಂಗಳೂರು | ೧೦೦೦.೦೦ |
| ೬೯೪. | ಶ್ರೀ ಜಿ.ಎಸ್. ಪಂಚಾಕ್ಷರಿ, ಬೆಂಗಳೂರು | ೩೦,೦೦೦.೦೦ |
| ೬೯೫. | ಶ್ರೀ ಎಂ. ಜಯಣ್ಣ, ಬೆಂಗಳೂರು | ೧೦೦೧.೦೦ |
| ೬೯೬. | ಶ್ರೀ ಹೆಚ್.ಸಿ. ಸಿದ್ಧಪ್ಪ, ಬೆಂಗಳೂರು | ೧೧೦೧.೦೦ |
| ೬೯೭. | ಶ್ರೀ ಕುಮಾರಸ್ವಾಮಿ, ಅಲೆದಾಳ್ | ೨೧೦೦.೦೦ |
| ೬೯೮. | ಶ್ರೀ ಕೆ.ಸಿ. ಬಸಪ್ಪ, ಬೆಂಗಳೂರು | ೩೬,೫೦೦.೦೦ |

(ಮುಂದುವರೆಯುತ್ತದೆ)



ಸಿದ್ಧಗಂಗಾ ತಾಂತ್ರಿಕ ಕಾಲೇಜಿನ 6ನೇ ಪದವಿ ಪ್ರದಾನ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡಿದರು.




ಸಿದ್ಧಗಂಗಾ ತಾಂತ್ರಿಕ ಕಾಲೇಜಿನ 6ನೇ ಪದವಿ ಪ್ರದಾನ ಸಮಾರಂಭದಲ್ಲಿ ಪರಮಪೂಜ್ಯರೊಡನೆ ಪದವಿ ಪಡೆದ ವಿದ್ಯಾರ್ಥಿಗಳು.




ತುಮಕೂರು ಗ್ರೈನ್ ಮರ್ಚೆಂಟ್ಸ್ ಕೋ ಆಪರೇಟಿವ್ ಬ್ಯಾಂಕ್ ವತಿಯಿಂದ ಏರ್ಪಡಿಸಿದ್ದ ಸಂಸ್ಥಾಪಕರ ದಿನಾಚರಣೆ ಸಮಾರಂಭದ ಉದ್ಘಾಟನೆಯನ್ನು ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನೆರವೇರಿಸಿದರು. ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ಶಿವಾನಂದ ಶಿವಾಚಾರ್ಯಸ್ವಾಮಿಗಳು, ಸಂಸದ ಎಸ್.ಪಿ. ಮುದ್ದಹನುಮೇಗೌಡ, ಟಿ.ಜಿ.ಎಂ.ಸಿ. ಬ್ಯಾಂಕ್ ಅಧ್ಯಕ್ಷರಾದ ಶ್ರೀ ಎನ್.ಆರ್. ಜಗದೀಶ್, ಬ್ಯಾಂಕಿನ ನಿರ್ದೇಶಕರುಗಳು ಹಾಗೂ ಆಡಳಿತ ಸಿಬ್ಬಂದಿಯವರು ಉಪಸ್ಥಿತರಿದ್ದರು.




ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಮತ್ತು ರಾಮಕೃಷ್ಣಾಶ್ರಮದ ಶ್ರೀ ವೀರೇಶಾನಂದ ಮಹಾಸ್ವಾಮಿಗಳವರು, ರೋಟರಿ ತುಮಕೂರು ಮತ್ತು ಬೆಂಗಳೂರು ಹಾಗೂ ರೀಡ್ ಬುಕ್ ಫೌಂಡೇಷನ್ ಇವರ ಸಂಯುಕ್ತಾಶ್ರಯದಲ್ಲಿ ಶ್ರೀಮಠದಲ್ಲಿ ನಡೆದ ಪುಸ್ತಕ ಸಂಸ್ಕೃತಿ ಅಭಿಯಾನ ಉದ್ಘಾಟನೆ ಸಮಾರಂಭವನ್ನು ಉದ್ಘಾಟಿಸಿದರು.




ಸಿದ್ಧಗಂಗಾ ತಾಂತ್ರಿಕ ಕಾಲೇಜಿನ 2015–16ನೇ ಸಾಲಿನಲ್ಲಿ ದಾಖಲಾದ ವಿದ್ಯಾರ್ಥಿಗಳ ಪ್ರಥಮ ವರ್ಷದ ತರಗತಿಗಳ ಪ್ರಾರಂಭೋತ್ಸವನ್ನು ಪರಮಪೂಜ್ಯರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.




ಸಿದ್ಧಗಂಗಾ ತಾಂತ್ರಿಕ ಕಾಲೇಜಿನ ಎಲೆಕ್ಟ್ರಾನಿಕ್ ಮತ್ತು ಕಮ್ಯುನಿಕೇಷನ್ ವಿಭಾಗದ ವಿದ್ಯಾರ್ಥಿನಿ ಕು. ಶಿಲ್ಪ ಇತರೆ ಎಲ್ಲಾ ವಿಭಾಗದ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಅಂಕ ಗಳಿಸಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಚಿನ್ನದ ಪದಕವನ್ನು ಪಡೆದು, ಇಸ್ರೋ ಅಧ್ಯಕ್ಷರಾದ ಡಾ. ಕಿರಣ್‌ಕುಮಾರ್ ಅವರಿಂದ ಪದವಿ ಪತ್ರವನ್ನು ಸ್ವೀಕರಿಸಿದರು.